॥ ಶ್ರೀ ॥

# ಆಥರ್ವಣೋಪನಿಷತ್

## ಶ್ರೀ ರಾಘವೇಂದ್ರಯತಿಕೃತ ಖಂಡಾರ್ಥ

## ಹಾಗೂ ಸರಳ ಕನ್ನಡ ಅನುವಾದ ಸಹಿತ



ಪ್ರಕಾಶಕರು :

ಶ್ರೀ ಸುಮಧ್ವ ಸೇವಾ ಸಮಿತಿ ಟ್ರಸ್ಟ್ (ರಿ.)

**ಶ್ರೀ ರಾಘವೇಂದ್ರ ಸ್ವಾಮಿಗಳ ಮಠ**

ಶಾಕಾಂಬರಿನಗರ, ಬೆಂಗಳೂರು – 560 070

**2008**

॥ ಶ್ರೀ ॥

# ಆಥರ್ವಣೋಪನಿಷತ್

ಶ್ರೀ ರಾಘವೇಂದ್ರಯತಿಕೃತ ಖಂಡಾರ್ಥ

ಹಾಗೂ ಸರಳ ಕನ್ನಡ ಅನುವಾದ ಸಹಿತ



ಪ್ರಕಾಶಕರು :

ಶ್ರೀ ಸುಮಧ್ವ ಸೇವಾ ಸಮಿತಿ ಟ್ರಸ್ಟ್ (ರಿ.)

ಶ್ರೀ ರಾಘವೇಂದ್ರ ಸ್ವಾಮಿಗಳ ಮಠ

ಶಾಕಾಂಬರಿನಗರ, ಬೆಂಗಳೂರು – 560 070

2008

ಶ್ರೀ

| | | |
|---|---|---|
| ಗ್ರಂಥದ ಹೆಸರು | : | ಆಥರ್ವಣೋಪನಿಷತ್ |
| ವ್ಯಾಖ್ಯಾನಕಾರರು | : | ಶ್ರೀ ರಾಘವೇಂದ್ರ ಗುರುಸಾರ್ವಭೌಮರು |
| ಅನುವಾದಕರು | : | ಮ॥ಶಾ॥ ಸಂ॥ ಶ್ರೀ ದ್ವಾರಕಾನಾಥಾಚಾರ್ಯರು<br>ಬೆಂಗಳೂರು |
| ಸಂಪಾದಕರು | : | ಮ॥ ಶಾ॥ ಸಂ॥ ಶ್ರೀ ಹೊಳವನಹಳ್ಳಿ ಶ್ರೀನಿವಾಸಾಚಾರ್ಯರು |
| ಪ್ರಕಾಶಕರು | : | ಶ್ರೀ ಸುಮಧ್ವ ಸೇವಾ ಸಮಿತಿ ಟ್ರಸ್ಟ್ (ರಿ.)<br>ಶ್ರೀ ರಾಘವೇಂದ್ರ ಸ್ವಾಮಿಗಳ ಮಠ<br>ಶಾಕಾಂಬರಿನಗರ, ಬೆಂಗಳೂರು–560 070 |
| ಪ್ರತಿಗಳು | : | 700 ಪುಸ್ತಕಗಳು |



| | | |
|---|---|---|
| ಮುದ್ರಕರು | : | ಶ್ರೀ ಪವನ್ ಎಂಟರ್‌ಪ್ರೈಸಸ್<br>ಬೆಂಗಳೂರು – 28 |

॥ ಶ್ರೀ ॥

# ಪ್ರಕಾಶಕರ ನುಡಿ

"ಆಥರ್ವಣೋಪನಿಷತ್" ಪ್ರಸಿದ್ಧ ದಶೋಪನಿಷತ್‌ಗಳಲ್ಲಿ ಒಂದು. ಪರಮಾತ್ಮನಿಂದ ಪ್ರಥಮರಾಗಿ ಜನಿಸಿದ ಚತುರ್ಮುಖ ಬ್ರಹ್ಮದೇವರು ವೈವಸ್ವತ ಮನ್ವಂತರದಲ್ಲಿ ತಮ್ಮ ಜೇಷ್ಠಪುತ್ರರಾದ ಅಥರ್ವಣ ಎಂಬ ಋಷಿಗಳಿಗೆ ಈ ಉಪನಿಷತ್ತನು ಉಪದೇಶಿಸಿದರು. ಆದ್ದರಿಂದ ಇದಕ್ಕೆ ಆಥವರ್ಣೋಪನಿಷತ್ ಎಂದು ಹೆಸರು. ಇದನ್ನು ಮುಂಡಕೋಪನಿಷತ್ ಎಂದೂ ಕರೆಯುತ್ತಾರೆ. ಈ ಉಪನಿಷತ್ತಿನ ಅನೇಕ ಮಂತ್ರಗಳು ಬ್ರಹ್ಮಸೂತ್ರಗಳಿಗೆ ವಿಷಯವಾಕ್ಯಗಳಾಗಿವೆ. ಶ್ರೀಹರಿಯ ಸರ್ವೋತ್ತಮತ್ವ, ಸರ್ವಸೃಷ್ಟಿಕರ್ತತ್ವ, ಜೀವೇಶ್ವರಭೇದ, ಪರಾಪರವಿದ್ಯಾ ಮೊದಲಾದವುಗಳು ಹೃದಯಂಗಮವಾಗಿ ಈ ಉಪನಿಷತ್‌ನಲ್ಲಿ ವರ್ಣಿತವಾಗಿದೆ. ಈ ಉಪನಿಷತ್ತಿಗೆ ಶ್ರೀ ಮದಾಚಾರ್ಯರು ಭಾಷ್ಯವನ್ನೂ, ಶ್ರೀ ರಾಘವೇಂದ್ರ ಸ್ವಾಮಿಗಳು ಖಂಡಾರ್ಥವನ್ನೂ ರಚಿಸಿದ್ದಾರೆ.

ಈಶಾವಾಸ್ಯ, ಮಾಂಡೂಕ್ಯ, ತಲವಕಾರ ಹಾಗೂ ಷಟ್ಪ್ರಶ್ನೋಪನಿಷತ್ ಖಂಡಾರ್ಥದ ನಂತರ ಈ ಆಥರ್ವಣೋಪನಿಷತ್ತನ್ನು ಶ್ರೀ ರಾಘವೇಂದ್ರ ತೀರ್ಥರ ಮೂಲ ಖಂಡಾರ್ಥ ಹಾಗೂ ಸರಳ ಕನ್ನಡಾನುವಾದೊಂದಿಗೆ ಶ್ರೀ ಗುರುರಾಜರ 337ನೇ ಆರಾಧನಾ ಸಂದರ್ಭದಲ್ಲಿ ಪ್ರಕಟಿಸುತ್ತಿದ್ದೇವೆ. ನಮ್ಮ ಪ್ರಾರ್ಥನೆಯಂತೆ ಸರಳ ಸುಂದರವಾಗಿ ಇದರ ಕನ್ನಡ ಅನುವಾದವನ್ನು ಮಾಡಿರುವ ದುರ್ಮತಭಂಜಕ "ಗೋಮಂಜರಿ" ಹಾಗೂ "ಉಪನಿಷದರ್ಥ ಮಂಜರಿ" ಗ್ರಂಥಕರ್ತೃಗಳಾದ ಮ॥ ಶಾ॥ ಸಂ॥ ಶ್ರೀ ದ್ವಾರಕಾನಾಥಾಚಾರ್ಯರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಬೆಂಗಳೂರಿನ "ಪವನ್ ಎಂಟರ್‌ಪ್ರೈಸಸ್"ನ ಮಾಲೀಕರಾದ ಶ್ರಿ ಕೆ.ಎನ್. ಅರುಣ್‌ಕುಮಾರ್‌ರವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಗ್ರಂಥ ಪ್ರಕಟಣೆಯ ಸಂಪೂರ್ಣ ವೆಚ್ಚವನ್ನು ವಹಿಸಿಕೊಂಡು ಶ್ರೀಹರಿವಾಯುಗುರುಗಳ ಸೇವೆ ಸಲ್ಲಿಸಿರುವ ಹೊಳವನಹಳ್ಳಿ ಅನಂತಪದ್ಮನಾಭಾಚಾರ್ಯರಿಗೂ ಹಾಗೂ ಅವರ ಕುಟುಂಬವರ್ಗದವರಿಗೆ ಶ್ರೀ ಹರಿವಾಯುಗುರುಗಳು ಇತೋಪ್ಯತಿಶಯ ಜ್ಞಾನಭಕ್ತಿವೈರಾಗ್ಯಾದಿಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥಪ್ರಕಾಶನಕ್ಕೆ ಸಹಕಾರ ನೀಡಿದ ಇತರ ಎಲ್ಲರಿಗೂ ವಂದನೆಗಳನ್ನು ಸಲ್ಲಿಸಿ, ಈ ಗ್ರಂಥಪ್ರಕಾಶನರೂಪ ತುಳಸಿದಳವನ್ನು ಶ್ರೀ ರಾಘವೇಂದ್ರಗುರ್ವಂತರ್ಗತ, ಭಾರತೀರಮಣ ಮುಖ್ಯಪ್ರಾಣಾಂತರ್ಗತ ಐತದುಪನಿಷತ್ ಪ್ರತಿಪಾದ್ಯ ಅಕ್ಷರನಾಮಕ ಶ್ರೀ ಲಕ್ಷ್ಮೀನರಸಿಂಹದೇವರ ಪಾದಕಮಲಗಳಲ್ಲಿ ಭಕ್ತಿಯಿಂದ ಸಮರ್ಪಿಸುತ್ತಿದ್ದೇವೆ.

॥ ಶ್ರೀ ಮಧ್ವೇಶಾರ್ಪಣಮಸ್ತು ॥

**ಶ್ರೀ ರಾಘವೇಂದ್ರ ತೀರ್ಥರ ಆರಾಧನಾ**
ಸರ್ವಧಾರಿ – ಶ್ರಾವಣ – ಬಹುಳ ಬಿದಿಗೆ

**ಶ್ರೀ ಸುಮಧ್ವ ಸೇವಾ ಸಮಿತಿ ಟ್ರಸ್ಟ್ (ರಿ.)**
ಬೆಂಗಳೂರು

# ಅಥ ಪ್ರಥಮಃ ಖಂಡಃ

ಅನಂತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ಮಂ ॥ ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ ವಿಶ್ವಸ್ಯ
ಕರ್ತಾ ಭುವನಸ್ಯ ಗೋಪ್ತಾ । ಸ ಬ್ರಹ್ಮವಿದ್ಯಾಂ
ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥1॥

ಖಂಡಾರ್ಥ : ಅಧಿಕಾರಿಣಾಮಖಿಲಕ್ಲೇಶನಿವೃತ್ತಿವಿಶಿಷ್ಟಪರಮಾನಂದಾವಾಪ್ತಯೇ ಬ್ರಹ್ಮವಿದ್ಯಾಂ ವಕ್ತುಕಾಮೋ "ಯೋ ಹ ವಾ ಅವಿದಿತಾರ್ಷ" ಇತ್ಯಾದಿಶ್ರುತೇಃ ಋಷಿದೇವತಾಛಂದೋಜ್ಞಾನಸ್ಯಾವಶ್ಯಕತ್ವಾದ್, 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದ್ಯುಕ್ತ್ಯಾ ದೇವತಾಜ್ಞಾನಸ್ಯ ಅಕ್ಷರಪರಿಗಣನಯಾ ತ್ರಿಷ್ಟುಬಾದಿಛಂದೋಜ್ಞಾನಸ್ಯ ಚ ಸುಕರತ್ವಾತ್ ಋಷಿಪರಂಪರಾಮೇವಾಹ–ಬ್ರಹ್ಮೇತ್ಯಾದಿನಾ॥ ಬ್ರಹ್ಮಾ ಚತುರ್ಮುಖಃ ದೇವಾನಾಂ ಶೇಷವೀಂದ್ರಾದೀನಾಂ ಪ್ರಥಮಃ ದೇವೇಭ್ಯಃ ಪ್ರಾಥಮಿಕಸ್ಸನ್ ವಿಷ್ಣೋಸ್ಸಕಾಶಾತ್ ಸಂಬಭೂವ ಜಜ್ಞೇ। ತಸ್ಯ ಮಹಿಮಾನಮಾಹ–ವಿಶ್ವಸ್ಯೇತಿ॥ ಗೋಪ್ತಾ ರಕ್ಷಕಃ॥ ಕರ್ತೃತ್ವಾದ್ಯುಕ್ತಿಸ್ತಸ್ಯಾಪ್ತತ್ವದ್ಯೋತನಾರ್ಥಾ । ಏತದುಕ್ತಿಪ್ರಾಪ್ತಸ್ವಾತಂತ್ರ್ಯಭ್ರಮನಿರಾಸಾಯ ವಿಷ್ಣುತಸ್ಸಂಭವೋಕ್ತಿರ್ಭಾಷ್ಯೇ। ಸ ಬ್ರಹ್ಮಾ ಸರ್ವವಿದ್ಯಾಪ್ರತಿಷ್ಠಾಂ ಸರ್ವಾಃ ವಿದ್ಯಾಃ ಪ್ರತಿತಿಷ್ಠಂತಿ ಯಸ್ಯಾಂ ತಾಂ ಯಜ್ಞಾನೇ ಸರ್ವವಿದ್ಯಾಃ ವಿದಿತಫಲಾಃ ಭವಂತಿ ತಾದೃಶೀ ಬ್ರಹ್ಮವಿದ್ಯಾಂ, ವೇತಿ ಅನಯೇತಿ ವಿದ್ಯಾಂ ಬ್ರಹ್ಮಪ್ರಮಿತಿಜನಕಶಬ್ದರಾಶಿಂ ಜ್ಯೇಷ್ಠಪುತ್ರಾಯ ವೈವಸ್ವತ ಮನ್ವಂತರೇ ಪ್ರಥಮತೋ ಜಾತಾಯಾಥರ್ವಾಯ ಅಥರ್ವನಾಮಕಾಯ ಅಕಾರಾಂತತ್ವಂ ಛಾಂದಸಂ, ಪ್ರಾಹ ॥

ಅನಂತಗುಣಪೂರ್ಣನಾದ, ದೋಷದೂರನಾದ, ಶ್ರೀ ಪ್ರಾಣನಾಥನಾದ, ಭಕ್ತಾಭೀಷ್ಟಪ್ರದಾಯಕನಾದ ವಿಷ್ಣುವಿಗೆ ನಮಸ್ಕಾರವು. ಅಧಿಕಾರಿಗಳಿಗೆ ಸಕಲ ಕ್ಲೇಶ ನಿವೃತ್ತಿಪೂರ್ವಕವಾಗಿ ಪರಮಾನಂದ ಪ್ರಾಪ್ತಿಗೆ ಕಾರಣವಾದ ಬ್ರಹ್ಮವಿದ್ಯೆಯನ್ನು ಹೇಳಲಿಚ್ಛೆವುಳ್ಳವರಾಗಿ, ಯಾರು ಋಷ್ಯಾದಿಗಳ ಜ್ಞಾನವಿಲ್ಲದೆ ಅಧ್ಯಯನ ಮಾಡುವರೋ ಅವರುಗಳು ಅನರ್ಥವನ್ನು ಹೊಂದುವರಾದ್ದರಿಂದ ಋಷಿದೇವತೆಗಳ

ಜ್ಞಾನವು ಅತ್ಯಾವಶ್ಯಕವಾದದ್ದರಿಂದ "ಯಯಾ ತದಕ್ಷರಮಧಿಗಮ್ಯತೆ" ಎಂಬ ವಾಕ್ಯದಿಂದ ದೇವತಾಜ್ಞಾನವು, ಅಕ್ಷರಗಳ ಗಣನೆಯಿಂದ ತ್ರಿಷ್ಟುಬಾದಿಗಳ ಜ್ಞಾನವು ಸುಲಭವಾದ್ದರಿಂದ, ಅವುಗಳನ್ನು ನಿರೂಪಿಸದೆ ಋಷಿಗಳ ಪರಂಪರೆಯನ್ನು ನಿರೂಪಿಸುತ್ತಾರೆ. ಬ್ರಹ್ಮ ಎಂಬುವುದರಿಂದ.

ಚತುರ್ಮುಖ ಬ್ರಹ್ಮದೇವರು, ದೇವತೆಗಳಿಗೆ ಪ್ರಥಮರಾಗಿ ಶ್ರೀವಿಷ್ಣುವಿನ ದೆಸೆಯಿಂದ ಉತ್ಪನ್ನರಾದರು. ಅವರು ಸಮಸ್ತ ಅಧಿಕಾರಿಜನಗಳಿಗೆ ಜ್ಞಾನೋಪದೇಶಕರ್ತರೂ ಆದ್ದರಿಂದ್ದಲೇ ಸಂಸಾರಭಯದಿಂದ ರಕ್ಷಕರೂ ಆಗಿದ್ದಾರೆ. ಬ್ರಹ್ಮದೇವರು ಆಪ್ತರಾಗಿದ್ದಾರೆಂದು ತಿಳಿಸಲು ಕರ್ತೃತ್ವಾದಿಗಳನ್ನು ಹೇಳಲಾಗಿದೆ. ಇದರಿಂದ ಉಂಟಾಗುವ ಬ್ರಹ್ಮದೇವರ ಸ್ವಾತಂತ್ರ್ಯಭ್ರಮವನ್ನು ಪರಿಹರಿಸಲು ಅವರಿಗೆ ಶ್ರೀ ವಿಷ್ಣುವಿನಿಂದ ಉತ್ಪತ್ತಿಯು ಭಾಷ್ಯದಲ್ಲಿ ಹೇಳಲ್ಪಟ್ಟಿದೆ. ಆ ಬ್ರಹ್ಮದೇವರು, ಯಾವ ವಿದ್ಯೆಯನ್ನು ತಿಳಿದರೆ ಎಲ್ಲಾ ವಿದ್ಯೆಗಳು ತಿಳಿಯಲ್ಪಟ್ಟ ಫಲವುಳ್ಳವುಗಳಾಗುತ್ತವೆಯೋ ಅಂತಹ ಬ್ರಹ್ಮವಿದ್ಯೆಯನ್ನು ಅಂದರೆ ಬ್ರಹ್ಮಜ್ಞಾನವನ್ನು ಹುಟ್ಟಿಸುವ ಶಬ್ಧರಾಶಿಯನ್ನು, ವೈವಸ್ವತಮನ್ವಂತರದಲ್ಲಿ ತಮ್ಮಿಂದ ಮೊದಲು ಉತ್ಪನ್ನರಾದ ಅಥರ್ವರೆಂಬ ಋಷಿಗಳಿಗೆ ಹೇಳಿದರು.

**ಮಂ ॥ ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾಽಥರ್ವಾ ತಾಂ ಪುರೋ-ವಾಚಾಂಗಿರೇ ಬ್ರಹ್ಮವಿದ್ಯಾಮ್ । ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ ಭರದ್ವಾಜೋಽಂಽಗಿರಸೇ ಪರಾವರಾಮ್ ॥2॥**

ಖಂಡಾರ್ಥ : ಪ್ರವದೇತ ಪ್ರಾವದದಿತ್ಯರ್ಥಃ। ವ್ಯತ್ಯಯೇನ ಲಂಗರ್ಥೇ ಲಿಂಗ್ । ಭಾಸನೋಪಸಂಭಾಷೇತ್ಯಾದಿನಾತ್ಮನೇಪದವ್। ಸ್ಪಷ್ಟಮುವದದಿತ್ಯರ್ಥಃ। ತಾಂ ಬ್ರಹ್ಮವಿದ್ಯಾಮಥರ್ವಾ ಅಂಗಿರೇ ಅಂಗಿರನಾಮಕಾಯ ಮುನಯೇ ಪುರಾ ಪೂರ್ವಮುವಾಚ। ಸ ಅಂಗಿರನಾಮಕೋ ಭಾರದ್ವಾಜಾಯ ಭರದ್ವಾಜಪುತ್ರಾಯ ನಾಮ್ನಾ ಸತ್ಯವಹಾಯ ಪ್ರಾಹ। ತಾಂ ಬ್ರಹ್ಮವಿದ್ಯಾಮಿತ್ಯನುಷಂಗಃ । ಭರದ್ವಾಜಃ ಅಂಗಿರಸೇ ಅಂಗಿರೋನಾಮಕಾಯ ತಾಂ ಬ್ರಹ್ಮವಿದ್ಯಾಂ ಪ್ರಾಹೇತ್ಯನುಷಂಗಃ। ಬ್ರಹ್ಮವಿದ್ಯಾಂ ವಿಶಿನಷ್ಟಿ – ಪರಾವರಾಮಿತಿ ॥ ಪರಾ ಚ ಸಾಽವರಾ ಚ ಪರಾವರಾ, ತಾಂ ಪರಾವರಾಮ್ । ಏಕೈವ ವಿದ್ಯಾವಿವಕ್ಷಾಭೇದೇನ ಪರಾ ಅವರಾ ಚ ಭವತೀ । ಸಾ ಚ ಋಗಾದಿರೂಪೇತ್ಯಗ್ರೇ ವ್ಯಕ್ತಾ ॥

ಪ್ರವದೇತ ಎಂಬುದನ್ನು ಪ್ರಾವದತ್ ಎಂದು ಅರ್ಥೈಸಬೇಕು. ವೇದಗಳಲ್ಲಿ ಲಂಗ್ ಅರ್ಥದಲ್ಲಿ ಲಿಂಗ್ ಪ್ರತ್ಯಯಗಳು ಬರುತ್ತವೆ. ಬ್ರಹ್ಮದೇವರು ಯಾವು ಬ್ರಹ್ಮವಿದ್ಯೆಯನ್ನು ಅಥರ್ವರಿಗೆ ಹೇಳಿದರೋ, ಆ ಬ್ರಹ್ಮವಿದ್ಯೆಯನ್ನು ಅಥರ್ವಋಷಿಗಳು ಅಂಗಿರಾ ಎಂಬ ಮುನಿಗಳಿಗೆ ಮೊದಲು ಹೇಳಿದರು. ಆ ಅಂಗಿರರು ಭರದ್ವಾಜರ ಮಕ್ಕಳಾದ ಸತ್ಯವಹರಿಗೆ ಹೇಳಿದರು. ಆ ಬ್ರಹ್ಮವಿದ್ಯೆಯನ್ನು ಸತ್ಯವಹರು ಅಂಗಿರಸನಾಮಕ ಋಷಿಗಳಿಗೆ ಹೇಳಿದರು. ಆ ಒಂದೇ ಬ್ರಹ್ಮವಿದ್ಯೆಯು ವಿವಕ್ಷಾಭೇದದಿಂದ ಪರ ಮತ್ತು ಅಪರ ವಿದ್ಯೆಗಳೆಂದು ಆಗುತ್ತದೆ. ಆ ಬ್ರಹ್ಮವಿದ್ಯೆಯು ಋಗಾದಿರೂಪವಾಗಿದೆ ಎಂದು ಮುಂದೆ ವ್ಯಕ್ತವಾಗುತ್ತದೆ.

**ಮಂ ॥ ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥ 3 ॥**

**ಖಂಡಾರ್ಥ : ಶೌನಕಃ ಶುನಕಪುತ್ರಃ ಮಹಾಶಾಲಃ, ಪ್ರತ್ಯಬ್ದಂ ಯಜ್ಞಕೃನ್ಮಹಾಶಾಲ ಇತ್ಯುಕ್ತಃ, "ಪ್ರತ್ಯಬ್ದಂ ಯಜ್ಞಕೃತ್ ಸಂಯುಕ್ ಮಹಾಶಾಲಃ ಪ್ರಕೀರ್ತಿತಃ" ಇತಿ ಛಾಂದೋಗ್ಯಭಾಷ್ಯೋಕ್ತೇಃ, ವಿಧಿವದ್ ವಿದ್ಯುಕ್ತಪ್ರಕಾರೇಣೋಪಸನ್ನಃ ಉಪಸತ್ತಿಂ ಪ್ರಾಪ್ತಃ ಅಂಗಿರಸಂ ಪಪ್ರಚ್ಛ । ಹೇ ಭಗವೋ ಭಗವನ್, ಪೂಜ್ಯಪಾದೇತಿಯಾವತ್, ಮತುವಸೋ ರೂಸ್ಸಂಬುದ್ಧೌ ಛಂದಸೀತಿ ರೂಃ, ಸರ್ವಮಿದಂ ಕರ್ಮದೇವತಾದಿಕಂ ಮಯಾ ಜ್ಞಾತಂ ವರ್ತತೇ । ತಜ್ಞಾನಂ ಕಸ್ಮಿನ್ ಜ್ಞಾತೇ ಸಫಲಂ ಭವತಿ? ಯಜ್ಞಾನಾರ್ಥಂ ಸತ್ ಮೋಕ್ಷಾಖ್ಯಫಲವದ್ಭವತಿ ತನ್ಮೇ ಪಪ್ರಚ್ಛೇತಿ ಯೋಜ್ಯಮ್ । ಹ ವಾ ಇತಿ ನಿಪಾತಃ ಪ್ರಸಿದ್ಧ್ಯರ್ಥಕಃ ॥**

ಪ್ರತಿ ಸಂವತ್ಸರದಲ್ಲಿಯೂ ಯಜ್ಞವನ್ನು ಅನುಷ್ಠಾನ ಮಾಡುವ ಶುನಕರ ಮಕ್ಕಳಾದ ಶೌನಕರು, ವಿಧಿಗನುಸಾರವಾಗಿ ಗುರುಗಳ ಉಪಸತ್ತಿಯನ್ನು ಹೊಂದುಕೊಂಡು ಅಂಗಿರಸರನ್ನು ಪ್ರಶ್ನಿಸಿದರು. ಪೂಜ್ಯರೇ, ಕರ್ಮದೇವತೆಗಳನ್ನು ತಿಳಿದಿದ್ದೇನೆ. ಆ ಜ್ಞಾನವು ಯಾರನ್ನು ತಿಳಿದರೆ ಫಲಿಸುತ್ತದೆ. ಯಾವುದನ್ನು ಜ್ಞಾನಮಾಡಿಕೊಂಡರೇ ಮೋಕ್ಷವೆಂಬ ಫಲವಾಗುತ್ತದೆ. ಆ ವಿಷಯವನ್ನು ನನಗೆ ತಿಳಿಸಿರಿ. ಹ, ವಾ ಈ ನಿಪಾತಗಳು ಪ್ರಸಿದ್ಧಿಯನ್ನು ತಿಳಿಸುತ್ತವೆ.

ಮಂ॥ ತಸ್ಮೈ ಸ ಹೋವಾಚ । ದ್ವೇ ವಿದ್ಯೇ ವೇದಿತವ್ಯೇ । ಇತಿ ಹ ಸ್ಮ ಯದ್ಬ್ರಹ್ಮವಿದೋ ವದಂತಿ । ಪರಾ ಚೈವಾಪರಾ ಚ ॥ 4 ॥

ಖಂಡಾರ್ಥ : ಕರ್ಮದೇವತಾದಿಜ್ಞಾನಂ ತದನುಷ್ಠಾನಾದಿನಾ ಬ್ರಹ್ಮಜ್ಞಾನಾರ್ಥಂ ಸನ್ಮೋಕ್ಷಾಖ್ಯಫಲವದ್ಭವತೀತಿ । 'ತದೇತತ್ಸತ್ಯಂ ಮಂತ್ರೇಷು' ಇತ್ಯಾದಿನಾ ವಿವಕ್ಷುರುಪೋದ್ಘಾತಪೂರ್ವಂ ಬ್ರಹ್ಮಸ್ವರೂಪಂ ತಾವದ್ವದಾಮೀತಿ ಭಾವೇನೋತ್ತರ-ಮುಕ್ತವಾನಿತ್ಯಾಹ ವೇದಪುರುಷಃ ತಸ್ಮೈಶೌನಕಾಯ ಸೋಽಂಗಿರಾ ಉವಾಚೇತಿ ॥ ಹೇತಿ ಹರ್ಷೇ । ಉಪೋದ್ಘಾತಮಾಹ – ದ್ವೇ ವಿದ್ಯೇ ಇತಿ ॥ ಪೂರ್ವತ್ರೇವಾತ್ರಾಪಿ ವಿದ್ಯಾಶಬ್ಧಃ ಕರಣಸಾಧನಃ । ವಿದ್ಯಾವಿತ್ತಿಜನಕಂ ಶಾಸ್ತ್ರಂ ದ್ವೇ ದ್ವಿವಿಧಮಿತ್ಯರ್ಥಃ । ಉಪಾಧಿದ್ವೈವಿಧ್ಯಾಭಿಪ್ರಾಯೇಣ ದ್ವಿವಚನೋಕ್ತಿಃ । ಇತಿ ಬ್ರಹ್ಮವಿದೋ ವದಂತಿ ಸ್ಮ । ಹೇತಿ ಪ್ರಸಿದ್ಧಮಿತ್ಯರ್ಥಃ॥ ತಥಾಚ ಸೂತ್ರಂ "ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ" ಇತಿ । ಕಥಮಿತ್ಯತ ಆಹ – ಪರಾಚೈವಾಪರಾ ಚೇತಿ । ಪರಮಮುಖ್ಯಾರ್ಥಬೋಧಕ-ತ್ವೋಪಾಧಿನಾ ಪರೈವ ಸತೀ ವಿದ್ಯಾ ಅಪರಾ ಅಮುಖ್ಯಾರ್ಥಬೋಧಕತ್ವೋಪಾಧಿನಾಽಪರಾ ಚೇತ್ಯುಚ್ಯತೇ । ನ ವಸ್ತುತಃ ವ್ಯಕ್ತಿಭೇದೋಽಸ್ತೀತ್ಯೇವಕಾರಪ್ರಯೋಗಃ ॥

ಕರ್ಮಜ್ಞಾನಾದಿಗಳು, ಅವುಗಳ ಅನುಷ್ಠಾನದ್ವಾರಾ ಬ್ರಹ್ಮಜ್ಞಾನಕ್ಕೆ ಇರುತ್ತವೆ. ಹಾಗಾದರೇ ಮೋಕ್ಷವು ಪ್ರಾಪ್ತವಾಗುತ್ತದೆ ಎಂದು 'ತದೇತತ್ ಸತ್ಯಂ ಮಂತ್ರೇಷು', ಎಂಬ ಮಂತ್ರಗಳಿಂದ ಹೇಳಲು ಇಚ್ಛಿಸುವವರಾಗಿ, ಅದಕ್ಕೆ ಉಪೋದ್ಘಾತರೂಪವಾಗಿ ಬ್ರಹ್ಮಸ್ವರೂಪವನ್ನು ಹೇಳಿದರೆಂದು ವೇದಪುರುಷರು ಹೇಳುತ್ತಾರೆ.

ಹ ಎಂಬುದು ಸಂತೋಷವನ್ನು ಉದ್ಗಾರ ಮಾಡುವ ಅರ್ಥದಲ್ಲಿರುತ್ತದೆ. ಉಪೋದ್ಘಾತವನ್ನು ಹೇಳುತ್ತಾರೆ. ಹಿಂದಿನಂತೆ ಇಲ್ಲೂ ಸಹ ವಿದ್ಯಾಶಬ್ದಕ್ಕೆ ವಿದ್ಯಾಸಾಧನ ವೇದರಾಶಿ ಎಂದರ್ಥ. ಜ್ಞಾನವನ್ನು ಹುಟ್ಟಿಸುವ ಶಾಸ್ತ್ರಗಳು ಎರಡು ಪ್ರಕಾರವಾಗಿದೆ. ಒಂದೇ ವೇದರಾಶಿಯು ಉಪಾಧಿನಿಮಿತ್ತಕವಾಗಿ ಎರಡು ಪ್ರಕಾರವೆಂದು ತಿಳಿಸಲು ಇಲ್ಲಿ ದ್ವಿವಚನ ಪ್ರಯೋಗವಾಗಿದೆ. ಈ ಪ್ರಕಾರವಾಗಿ ಬ್ರಹ್ಮಜ್ಞಾನಿಗಳು ಹೇಳುತ್ತಾರಷ್ಟೇ. ಈ ರೀತಿಯಲ್ಲಿ ನಿರೂಪಿಸುವ ಸೂತ್ರವು 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮ್' ಎಂದು. ಹೇಗೆ ಎಂದು ಪ್ರಶ್ನಿಸಿದರೆ ಹೇಳುತ್ತಾರೆ ಪರಚೈವಾಪರಾ ಚೇತಿ ಎಂಬುದಾಗಿ. ಪರಮಮುಖ್ಯಾರ್ಥ ಬೋಧಕವೆಂಬ

ಕಾರಣದಿಂದ ಪರಶಾಸ್ತ್ರವೇ ಆದ ವೇದರಾಶಿಗಳು, ಅಮುಖ್ಯಾರ್ಥಬೋಧಕ-ನಿಮಿತ್ತಕವಾಗಿ ಅಪರವಿದ್ಯೆ ಎಂದು ಹೇಳಲ್ಪಡುತ್ತವೆ. ಈ ಎರಡೂ ಬೇರೆ ಬೇರೆ ಪದಾರ್ಥಗಳಲ್ಲವೆಂದು ತಿಳಿಸಲು ಎವ ಶಬ್ದವು ಇರುತ್ತದೆ.

**ಮಂ ॥ ತತ್ರಾಪರಾ । ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ । ಅಥ ಪರಾ । ಯಯಾ ತದಕ್ಷರಮಧಿಗಮ್ಯತೇ ॥ 5 ॥**

ಖಂಡಾರ್ಥ : ಅಪರವಿದ್ಯೈವೋಪಾಧಿಭೇದೇನ ಪರವಿದ್ಯೇತಿ ಭಾವೇನ ಪ್ರಸ್ತಾವಪೂರ್ವಮಪರವಿದ್ಯಾಮಾಹ – ತತ್ರಾಪರೇತಿ । ಉಪಾಧಿಭೇದೇನ ಭಿನ್ನತಯಾ ನಿರ್ದಿಷ್ಟಯೋರ್ಮಧ್ಯೇ ಇತ್ಯರ್ಥಃ । ವರ್ಣಾನಾಂ ಸ್ಥಾನಪ್ರಯತ್ನಾದಿರೂಪಕಂ ಶಾಸ್ತ್ರಂ ಶಿಕ್ಷಾ । ಪ್ರಸಿದ್ಧ ಪ್ರಯೋಗಬೋಧಿನೋ ಬೌಧಾಯನಾಪಸ್ತಂಬಾಶ್ವಲಾಯನಾದಿ ಗ್ರಂಥಾಃ ಕಲ್ಪಃ ।

ಸಿದ್ಧರೂಪಪ್ರಯೋಗೋ ಯೈಃ ಕರ್ಮಣಾಮನುಗಮ್ಯತೇ ।
ತೇ ಕಲ್ಪಾ ಲಕ್ಷಣಾರ್ಥಾನಿ ಸೂತ್ರಾಣೀತಿ ಪ್ರಚಕ್ಷತೇ ॥

ಇತಿ ತಂತ್ರವಾರ್ತಿಕೋಕ್ತೇಃ । ಶಬ್ದಾನುಶಾಸನಪರಂ ವ್ಯಾಕರಣಮ್ । ಶಬ್ದನಿರ್ವಚನಪರಂ ನಿರುಕ್ತಮ್ । ಗಾಯತ್ರ್ಯುಷ್ಣಿಗಾದಿಛಂದಸಾಂ ಲಕ್ಷಣನಿರೂಪಕಂ ಛಂದಃ । ಕಾಲನಿರ್ಣಯಪರಂ ಶಾಸ್ತ್ರಂ ಜ್ಯೋತಿಷಮ್ । ಏತದೇವ ಋಗಾದಿಶಾಸ್ತ್ರಮಕ್ಷರಾಧಿಗತಿಹೇತುತ್ವೋಪಾಧಿನಾ ಪರವಿದ್ಯೇತಿ ಭಾವೇನಾಹ – ಅಥ ಪರೇತಿ ॥ ಅವಸರಪ್ರಾಪ್ತಾ ಪರವಿದ್ಯಾ ನಿರೂಪ್ಯತೇ ಇತ್ಯರ್ಥಃ । ಯದದ್ರೇಶ್ಯತ್ವಾದಿಗುಣಕಂ ತದಕ್ಷರಂ ಯಯಾ ವಿದ್ಯಯಾ ವಿತ್ತಿಜನಕಋಗಾದಿಶಾಸ್ತ್ರೇಣಾಧಿಗಮ್ಯತೇ ಸಾಽಕ್ಷರಜ್ಞಪ್ತಿಹೇತುತ್ವೋಪಾಧಿನಾ ಪರವಿದ್ಯೇತ್ಯುಚ್ಯತೇ ಇತ್ಯರ್ಥಃ । ತದುಕ್ತಂ "ಋಗಾದ್ಯಾಃ ಅಪರಾ ವಿದ್ಯಾ" ಇತ್ಯಾದಿ । ಯಥೈಕಮೇವ ಚ ಕರ್ಮ ಸಕಾಮತ್ವನಿಷ್ಕಾಮತ್ವೋಪಾಧಿಭ್ಯಾಂ ಪ್ರವೃತ್ತಂ ನಿವೃತ್ತಮಿತಿ ಚೋಚ್ಯತೇ ತಥೇತಿ ಭಾವಃ ॥

ಅಪರವಿದ್ಯೆಯೇ ಬೇರೆಕಾರಣದಿಂದ ಪರವಿದ್ಯೆಯಾಗುತ್ತದೆಂಬ ಅಭಿಪ್ರಾಯದಿಂದ ಪ್ರಸ್ತಾವಪೂರ್ವಕವಾಗಿ ಅಪರವಿದ್ಯೆಯನ್ನು ನಿರೂಪಿಸುತ್ತಾರೆ. ಉಪಾಧಿನಿಮಿತ್ತಕವಾಗಿ ಭಿನ್ನವಾಗಿ ನಿರ್ದಿಷ್ಟವಾದವುಗಳ ಮಧ್ಯದಲ್ಲಿ, ಋಗ್ವೇದ, ಯಜುರ್ವೇದ,

ಸಾಮವೇದ, ಅರ್ಥವಣವೇದವೂ, ವರ್ಣಗಳ ಸ್ಥಾನಪ್ರಯತ್ನಗಳನ್ನು ನಿರೂಪಿಸುವ ಶಾಸ್ತ್ರವಾದ ಶಿಕ್ಷಾಶಾಸ್ತ್ರವು, ಪ್ರಸಿದ್ಧ ಪ್ರಯೋಗಗಳನ್ನು ಬೋಧಿಸುವ ಬೌಧಾಯನಾಪಸ್ತಂಭಾಶ್ವಲಾಯನಾದಿ ಗ್ರಂಥಗಳು ಕಲ್ಪವು, ಸಭಾರ್ಥಗಳನ್ನು ನಿರ್ವಚಿಸುವ ನಿರುಕ್ತಶಾಸ್ತ್ರವು, ಗಾಯತ್ರ್ಯಾದಿಛಂದಸ್ಸುಗಳನ್ನು ನಿರೂಪಿಸುವ ಛಂದಶ್ಶಾಸ್ತ್ರವು ಕಾಲನಿರ್ಣಯಪರವಾದ ಜ್ಯೋತಿಷ್ಯಾಸ್ತ್ರವು, ಇವುಗಳು ಅಪರ ವಿದ್ಯೆಗಳು. ಇದ ಋಗಾದಿಶಾಸ್ತ್ರಗಳು, ಅಕ್ಷರನಾಮಕನಾದ ಶ್ರೀಹರಿಯನ್ನು ತಿಳಿಸುವ ನಿಮಿತ್ತವಾಗಿ ಪರವಿದ್ಯೆಯೆಂಬ ಭಾವನೆಯಿಂದ ನಿರೂಪಿಸುತ್ತಾರೆ. ಈಗ ಪ್ರಾಪ್ತವಾದ ಪರವಿದ್ಯೆಯು ನಿರೂಪಿಸಲ್ಪಡುತ್ತದೆ. ಅದ್ರೇಶ್ಯತ್ವಾದಿ ಗುಣಗಳುಳ್ಳ ಶ್ರೀಹರಿಯು ಯಾವ ಜ್ಞಾನಜನಕ ಋಗಾದಿಶಾಸ್ತ್ರದಿಂದ ತಿಳಿಯಲ್ಪಡುತ್ತಾನೆಯೋ ಆ ಶ್ರೀಹರಿಯನ್ನು ತಿಳಿಸುವ ನಿಮಿತ್ತಕವಾಗಿ ಈ ಋಗಾದಿವೇದಗಳು ಪರವಿದ್ಯೆಯನಿಸಿಕೊಳ್ಳುತ್ತವೆ. ಈ ವಿಷಯವನ್ನು ಶ್ರೀಮಧ್ವಾಚಾರ್ಯರು 'ಋಗಾದ್ಯಾ ಅಪರಾ ವಿದ್ಯಾ' ಎಂಬ ವಾಕ್ಯದಿಂದ ನಿರೂಪಿಸಿದ್ದಾರೆ. ಒಂದೇ ಕರ್ಮವು ಸಕಾಮವಾದರೆ ಪ್ರವೃತ್ತಿಕರ್ಮವಾಗುತ್ತದೆ. ಅದೇ ನಿಷ್ಕಾಮವಾದರೆ ನಿವೃತ್ತಿಕರ್ಮವಾಗುತ್ತದೆ. ಅದರಂತೇ ಒಂದೇ ಋಗಾದಿ ವೇದರಾಶಿಗಳು ಶ್ರೀಹರಿಯನ್ನು ಪ್ರತಿಪಾದಿಸಿದಾಗ ಪರವಿದ್ಯೆಗಳಾಗುತ್ತವೆ. ಅದೇ ವೇದರಾಶಿಗಳು ಕರ್ಮ, ಬೇರೆ ದೇವತೆಗಳನ್ನು ನಿರೂಪಿಸಿದಾಗ ಅಪರವಿದ್ಯೆಗಳಾಗುತ್ತದೆ.

**ಮಂ ॥ ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಂ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ ॥ 6 ॥**

ಖಂಡಾರ್ಥ : ಕೀದೃಶಂ ತದಕ್ಷರಮಿತ್ಯತಸ್ತನ್ಮಹಿಮಾನಮಾಹ – ಯತ್ತದಿತಿ ॥ ಯದಕ್ಷರಮದ್ರೇಶ್ಯಂ ದೃಷ್ಟ್ಯುಪಲಕ್ಷಿತಬಾಹ್ಯೇಂದ್ರಯಾವಿಷಯಃ, ಅಗ್ರಾಹ್ಯಂ ಮನಸೋಽಪಿ ಅವಿಷಯಃ । ಸಾಕಲ್ಯೇನೇತಿವಾ ಅಯೋಗ್ಯೈರಿತಿವಾ ಯೋಜ್ಯಮ್ । ಯದ್ವಾ, ದೃಶ್ಯಾದನ್ಯದದೃಶ್ಯಮ್ । ಗ್ರಾಹ್ಯಾದನ್ಯದಗ್ರಾಹ್ಯಮಿತ್ಯರ್ಥಃ । ನ ವಿದ್ಯತೇ ಗೋತ್ರಂ ವರ್ಣೋ ವಾ ಯಸ್ಯ ತದಗೋತ್ರಮ್ ಅವರ್ಣಮ್ । ಅಚಕ್ಷುಃಶ್ರೋತ್ರಮಿತ್ಯಾದೇಃ ಪ್ರಾಕೃತಚಕ್ಷುರಾದಿಶೂನ್ಯಮಿತ್ಯರ್ಥಃ । ನಿತ್ಯಂ ದೇಹತೋಽಪಿ ನಾಶರಹಿತಂ । ವಿಭುಂ

ಸಮರ್ಥಂ । ಸರ್ವಗತಂ ಸರ್ವವ್ಯಾಪಿ । ಸರ್ವಗತತ್ವೇ ಪ್ರತಿಹತಿಃ ಸ್ಯಾತ್ ಇತ್ಯತ ಆಹ - ಸುಸೂಕ್ಷ್ಮಮಿತಿ ॥ ಅತ್ಯಂತಾಪ್ರತಿಘಮ್ । "ಸೂಕ್ಷ್ಮಂ ತು ತದರ್ಹತ್ವಾತ್" ಇತ್ಯುಕ್ತೇಃ । ತತ್ತ್ವಯಾಪೃಷ್ಟಮಕ್ಷರಮಿತಿ ಪೂರ್ವಂ ಶ್ರುತತತ್ಪದಸ್ಯಾನ್ವಯಃ । ಅದ್ರೇಶ್ಯಮಿತ್ಯುಕ್ತಿಃ ನ ಸರ್ವಥಾ ಇತಿ ಭಾವೇನಾಕ್ಷರಸ್ಯ ಗುಣಾಂತರಮಾಹ - ತದವ್ಯಯಮಿತ್ಯಾದಿನಾ ॥ ಯದಕ್ಷರಂ ಭೂತಾನಾಂ ಪ್ರಾಣಿನಾಂ ಯೋನಿಂ ಕಾರಣಂ ಧೀರಾ ಜ್ಞಾನಿನಃ ಪರಿಪಶ್ಯಂತಿ ಅವ್ಯಯಂ ಶಶ್ವದೇದಪ್ರಕಾರಭೂತಂ, ತತ್ ಪ್ರಾಗುಕ್ತಮಕ್ಷರಮಿತ್ಯರ್ಥಃ । ತಥಾ ಚ ಸೂತ್ರಂ "ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ" ಇತಿ ॥

ಆ ಅಕ್ಷರನಾಮಕನು ಹೇಗಿದ್ದಾನೆಂದು ಪ್ರಶ್ನಿಸಿದಾಗ ಆ ಅಕ್ಷರನಾಮಕ ಶ್ರೀಹರಿಯ ಮಹಿಮೆಯನ್ನು ನಿರೂಪಿಸುತ್ತಾರೆ. ಆ ಅಕ್ಷರನಾಮಕನಾದ ಶ್ರೀ ಹರಿಯು ಕಣ್ಣು ಎಂಬುದರಿಂದ ಉಪಲಕ್ಷಿತವಾದ ಸಮಸ್ತ ಬಾಹ್ಯೇಂದ್ರಿಯಗಳಿಂದ ತಿಳಿಯಲು ಅಶಕ್ಯನು. ಮನಸ್ಸಿನಿಂದ (ಪೂರ್ಣವಾಗಿ ಅಥವಾ ಅಯೋಗ್ಯರುಗಳಿಂದ) ತಿಳಿಯಲು ಸಾಧ್ಯವಿಲ್ಲದವನು ಅಥವಾ ದೃಶ್ಯಪದಾರ್ಥಗಳಿಂದ ಭಿನ್ನನು. ಗ್ರಾಹ್ಯಪದಾರ್ಥಗಳಿಂದ ಭಿನ್ನನು. ಗೋತ್ರರಹಿತನು. ಪ್ರಕೃತಿ ವರ್ಣರಹಿತನು. ಪ್ರಾಕೃತಚಕ್ಷುಶ್ರೋತ್ರಾದಿಗಳಿಂದ ರಹಿತನು. ದೇಹ ನಿಮಿತ್ತವಾಗಿಯೂ ನಾಶರಹಿತನು. ಸಮರ್ಥನು. ಸರ್ವತ್ರ ವ್ಯಾಪ್ತನಾದವನು, ಸೂಕ್ಷ್ಮನಾಗಿದ್ದಾನೆ. ಇನ್ನೊಬ್ಬರಿಂದ ಹೊಡಿಸಿಕೊಳ್ಳಲು ಸಾಧ್ಯವಾಗದವನು. 'ಸೂಕ್ಷ್ಮಂತು ತದರ್ಹತ್ವಾತ್' ಎಂಬ ಸೂತ್ರದಲ್ಲಿ ಈ ವಿಷಯವು ನಿರೂಪಿತವಾಗಿದೆ. ಸಮಸ್ತ ಪ್ರಾಣಿಗಳಿಗೆ ಕಾರಣನಾದ, ಎಲ್ಲಾ ಕಾಲದಲ್ಲಿಯೂ ಏಕಪ್ರಕಾರನಾದ ಅಕ್ಷರನಾಮಕನಾದ ಶ್ರೀಹರಿಯನ್ನು ಜ್ಞಾನಿಗಳು ತಿಳಿಯುತ್ತಾರೆ. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬ ಸೂತ್ರವು ಇದನ್ನು ನಿರೂಪಿಸುತ್ತದೆ.

**ಮಂ ॥ ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋ-ಷಧಯಃ ಸಂಭವಂತಿ । ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾऽಕ್ಷರಾತ್ಸಂಭವತೀಹ ವಿಶ್ವಂ ॥ 7 ॥**

ಖಂಡಾರ್ಥ : ಯದ್ಭೂತಯೋನಿಮಿತ್ಯುಕ್ತಭೂತಕಾರಣತ್ವಂ ಸಂಹರ್ತೃತ್ವಸ್ಯೋಪಲಕ್ಷ-ಣಮಿತ್ಯುಪೇತ್ಯ ತದುಭಯಪ್ರಕಾರಂ ದೃಷ್ಟಾಂತಪೂರ್ವಂ ವ್ಯನಕ್ತಿ - ಯಥೇತಿ ॥ ಊರ್ಣನಾಭಿರ್ಜಂತುವಿಶೇಷಸ್ಸ್ವೋಪಭುಕ್ತವಸ್ತೂನಿ ತಂತ್ವಾತ್ಮನಾ ಸ್ವೋದರೆ ಪರಿಣತಾನಿ

ಸೃಜತೆ ಬಹಿರ್ನಿಷ್ಕಾಸಯತಿ । ಗೃಹ್ಣತೇ ಗೃಹ್ಣಾತಿಚ । ತಂತ್ವಾದ್ಯಾಕಾರತಯಾ ಬಹಿರ್ನಿಷ್ಕಾಸಿತಂ ಪುನರಂತಸ್ಸ್ವೋದರೆ ಗೃಹ್ಣಾತಿ । ತಥಾ ವಿಶ್ವಂ ಲಯೇ ನಿಗೀರ್ಣಂ ಸತ್ ಅಕ್ಷರಾತ್ ಬರ್ಹಿರ್ದೇಶೆ ಸಂಭವತೀತ್ಯರ್ಥಃ । ನತು ವಿಶ್ವಾತ್ಮನಾ ಪರಿಣಮಮಾನತ್ವಂ, ನವಾ ತದಾತ್ಮನಾ ವಿವರ್ತತ್ವಂ ಚ ಭೂತಯೋನಿತ್ವಮಿತ್ಯರ್ಥಃ । ಏತಚ್ಚೋಪಲಕ್ಷಣಮ್ । ಊರ್ಣನಾಭಿನಾ ತಂತುರಾಶಿರಿವ ಸಂಹ್ರಿಯತೇ ಚೇತ್ಯಪಿ ಧ್ಯೇಯಮ್ । ನಾನಾವಿಧಸೃಷ್ಟೌ ವೈಷಮ್ಯಾದಿದೋಷ ಕಿಂನ್ನೆತ್ಯತ ಉಕ್ತಮ್ – ಯಥಾ ಪೃಥಿವ್ಯಾಮಿತಿ ॥ ಯಥಾ ಪೃಥಿವೀ ಶಾಲ್ಯಾದಿನಾನಾಬೀಜಾನ್ಯಪೇಕ್ಷ್ಯ ನಾನಾವಿಧ ಅಂಕುರಾನ್ ಜನಯತೀ ತಥಾ ಜೀವಾನಾಂ ನಾನಾವಿಧ ಕರ್ಮಾಣ್ಯನುಸೃತ್ಯ ನಾನಾವಿಧಜೀವಾನ್ ಸೃಜತೀತ್ಯರ್ಥಃ । ತಥಾಚ ಸೂತ್ರಮ್ "ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್" ಇತಿ । ನನು ಅಕ್ಷರಸ್ಯ ವಿಶ್ವಸೃಷ್ಟ್ಯಾದಿನಾ ಫಲಸತ್ವೇಽಪೂರ್ಣತಾಪ್ರಾಪ್ತಿಃ । ತದಸತ್ವೇ ಪ್ರೇಕ್ಷಾವತಃ ತತ್ರ ಪ್ರವೃತ್ತ್ಯಯೋಗಃ ಇತ್ಯತ ಉಕ್ತಮ್ – ಯಥಾ ಸತ ಇತಿ ॥ ಯಥಾ ಸತಶ್ಚೇತನಾಧಿಷ್ಠಿತಾತ್ ಪುರುಷದೇಹಾತ್ ಕೇಶಲೋಮಾನಿ ಅನಾಯಾಸೇನ ಭವಂತಿ ತಥಾ ಅಕ್ಷರಾದನಾಯಾಸೇನ ವಿಶ್ವಂ ಸಂಭವತೀತ್ಯರ್ಥಃ । ಅತ್ಯಾಯಾಸಸಾಧ್ಯೇ ಹಿ ಫಲಾಪೇಕ್ಷಾ ॥ ಅನಾಯಾಸಸಾಧ್ಯೇಽಂಗುಲಿಚಾಲನಾದೌ ಲೋಕೇ ಪ್ರೇಕ್ಷವತಾಮಪಿ ನ ಫಲಾಪೇಕ್ಷಾಽಸ್ತೀತಿ ಭಾವಃ । ಶಿರೋರುಹಾಃ ಕೇಶಾಃ ದೇಹಜಾನಿ ಲೋಮಾನೀತಿ ವಿವೇಕಃ ॥

ಪ್ರಾಣಿಗಳಿಗೆ ಕಾರಣನಾಗಿದ್ದಾನೆಂಬುವದರಿಂದ ಸಂಹಾರಕಾರಣತ್ವವನ್ನೂ ಸ್ವೀಕರಿಸಬೇಕೆಂದು ಸೃಷ್ಟಿ ಸಂಹಾರಪ್ರಕಾರಗಳನ್ನು ದೃಷ್ಟಾಂತಪೂರ್ವಕವಾಗಿ ನಿರೂಪಿಸುತ್ತಾರೆ.

ಜೇಡರ ಹುಳವು ತಾನೇ ತಿಂದಿರುವಂತಹ ಪದಾರ್ಥಗಳನ್ನು, ಎಳೆಗಳ ರೂಪವಾಗಿ ತನ್ನ ಉದರದಲ್ಲಿ ಪರಿಣಮಿಸಿ ಎಳೆಗಳನ್ನು ಹೊರಗೆ ನಿಷ್ಕಾಸಿಸುತ್ತದೆ. ಎಳೆಗಳ ರೂಪದಲ್ಲಿ ಹೊರಗೆ ಇರುವ ಬಲೆಯನ್ನು ಪುನಃ ತನ್ನುದರದಲ್ಲಿ ಸ್ವೀಕರಿಸುತ್ತದೆ. ಅದೇ ರೀತಿಯಲ್ಲಿ ತನ್ನ ಉದರದಲ್ಲಿ ಪ್ರಳಯಕಾಲದಲ್ಲಿ ಗ್ರಹಿಸಿದ ಈ ಜಗತ್ತನ್ನು ಶ್ರೀಹರಿ ಸೃಷ್ಟಿಯಕಾಲದಲ್ಲಿ ಹೊರಗೆ ಹಾಕಿ ಸೃಷ್ಟಿಸುತ್ತಾನೆ. ಆದರೆ ಎಂದೂ ಶ್ರೀಹರಿ ಈ ಜಗತ್ತಾಗಿ ಪರಿಣಮಿಸುವುದಿಲ್ಲ. ಅಥವಾ ವಿವೃತ್ತರೂಪನಾಗಿಯೂ ಆಗುವುದಿಲ್ಲ. ಜೇಡ ಹೇಗೆ ತನ್ನ ಬಲೆಯನ್ನು ಸಂಹರಿಸುತ್ತದೆಯೋ ಅದೇ ರೀತಿಯಲ್ಲಿ ಶ್ರೀಹರಿಯೂ ಸಹ ಈ ಜಗತ್ತನ್ನು ಸಂಹರಿಸುತ್ತಾನೆ. ಈ ರೀತಿ ನಾನಾವಿಧವಾದ ಸೃಷ್ಟಿಯನ್ನು ಮಾಡಿದರೆ

ಶ್ರೀಹರಿಗೆ ವೈಷಮ್ಯಾದಿದೋಷಗಳು ಬರುವುದಿಲ್ಲವೇ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ. ಭೂಮಿಯಲ್ಲಿ ನಾನಾ ಪ್ರಕಾರವಾದ ಬೀಜಗಳನ್ನು ಬಿತ್ತಿದಾಗ ನಾನಾ ಪ್ರಕಾರವಾದ ಭಿನ್ನ ಭಿನ್ನವಾದ ಗಿಡಗಳು ಹೇಗೆ ಬೆಳೆಯುತ್ತವೋ ಅದೇ ರೀತಿಯಲ್ಲಿ ಶ್ರೀಹರಿ ಜೀವರುಗಳ ನಾನಾಕರ್ಮಗಳನ್ನು ಅನುಸರಿಸಿ ನಾನಾ ಪ್ರಕಾರವಾದ ಜೀವರುಗಳನ್ನು ಸೃಷ್ಟಿಸುತ್ತಾನೆ. ಈ ವಿಷಯವನ್ನು ಸೂತ್ರಕಾರರು 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್' ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಈ ಜಗತ್ತಿನ ಸೃಷ್ಟಿಯಿಂದ ಶ್ರೀಹರಿಗೆ ಪ್ರಯೋಜನವಿದ್ದಲ್ಲಿ ಅವನು ಅಪೂರ್ಣನಾಗುತ್ತಾನೆ. ಪ್ರಯೋಜನವಿಲ್ಲದಿದ್ದರೆ ಜ್ಞಾನಿಗಳು ವ್ಯರ್ಥವಾದ ಕಾರ್ಯವನ್ನು ಮಾಡುವುದಿಲ್ಲವಾದ್ದರಿಂದ, ಜಗತ್ತಿನ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತನಾಗುವುದಿಲ್ಲ ಎಂದು ಆಪೇಕ್ಷಿಸಿದರೆ ಉತ್ತರಿಸುತ್ತಾರೆ. ಜೀವ ಸಂಬಂಧವಿರುವ ಈ ಶರೀರದಿಂದ ಕೂದಲುಗಳು ಅನಾಯಾಸವಾಗಿ ಹೇಗೆ ಆಗುತ್ತವೆಯೋ ಅದೇ ರೀತಿಯಲ್ಲಿ ಶ್ರೀಹರಿಯು ಈ ಜಗತ್ತನ್ನು ಅನಾಯಾಸವಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. ಫಲಾಪೇಕ್ಷೆಯು ಆಯಾಸಸಾಧ್ಯ ಕಾರ್ಯಗಳಲ್ಲಿ ಮಾತ್ರವಿರುತ್ತದೆ. ಎಂಬುದು ಜಗತ್ತಿನ ನಿಯಮವು. ಅನಾಯಾಸ ಸಾಧ್ಯವಾದ ಬೆರಳಾಡಿಸುವಿಕೆಯೇ ಮೊದಲಾದ ವ್ಯಾಪಾರಗಳಲ್ಲಿ ಫಲಾಪೇಕ್ಷೆಯು ಇಲ್ಲದೇ ಇರುವುದು ಜ್ಞಾನಿಗಳ ವ್ಯಾಪಾರದಲ್ಲಿಯೂ ಕಂಡಿದೆ. ತಲೆಯಲ್ಲಿ ಬೆಳೆಯುವ ಕೂದಲುಗಳಿಗೆ ಕೇಶಗಳೆನ್ನುತ್ತಾರೆ. ದೇಹದ ಬೇರೆ ಭಾಗಗಳಲ್ಲಿ ಬೆಳೆಯುವ ಕೂದಲುಗಳಿಗೆ ಲೋಮವೆನ್ನುತ್ತಾರೆ.

**ಮಂ ॥ ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಮ್ ॥ 8 ॥**

**ಖಂಡಾರ್ಥ : ಯಥಾ ಪೃಥಿವ್ಯಾಮಿತಿ ದೃಷ್ಟಾಂತೋಕ್ತ್ಯಾ ಪ್ರಾಪ್ತಪರಿಣಾಮಶಂಕಾಂ ನಿರಸ್ಯನ್ನಕ್ಷರಾದ್ವಿಶ್ವಸಂಭವಕ್ರಮಂ ವ್ಯನಕ್ತಿ – ತಪಸೇತಿ ॥ ಅಕ್ಷರಾಖ್ಯಂ ಬ್ರಹ್ಮ ತಪಸಾ ಜ್ಞಾನೇನ ಚೀಯತೇ ಸಂಬಧ್ಯತೇ । ಬ್ರಹ್ಮ ವಿಶ್ವಂ ಸೃಜಾನೀತಿ ವ್ಯಚಾರಯದಿತಿ ಯಾವತ್ । ಜ್ಞಾನರೂಪವಿಚಾರವತೋ ನ ಪರಿಣಾಮಿತೇತಿ ಭಾವಃ । ತತೋ ವಿಚಾರಾನಂತರಮಿತಿ, ವಿಚಾರಿತವತೋ ಬ್ರಹ್ಮಣಃ ಇತಿ ವಾ । ಅತ್ರಾನ್ನಾದಿಪದೈರ್ಜಡಂ ತದಭಿಮಾನಿದೇವತಾ ಚ ಗ್ರಾಹ್ಯಾ । ಲೋಕಾಃ ಜಾಯಂತೇ ಇತ್ಯನುಷಂಗಃ । ತದನಂತರಂ ಕರ್ಮ ಜಾಯತೇ ಇತಿ**

ಶೇಷಃ । ಜಾತೇಷು ಕರ್ಮಸು ನಿಮಿತ್ತಭೂತೇಷು ಅಮೃತಂ ಸ್ವರ್ಗಾದಿಫಲಂ ಜಾಯತೇ ಇತ್ಯನುಷಂಗಃ ॥

ಹಿಂದಿನ ದೃಷ್ಟಾಂತದಿಂದ ಪ್ರಾಪ್ತವಾದ ಪರಿಣಾಮದ ಶಂಕೆಯನ್ನು ನಿರಾಕರಿಸಿ ಶ್ರೀಹರಿಯಿಂದ ಜಗತ್ತಿನ ಉತ್ಪತ್ತಿಯ ಕ್ರಮವನ್ನು ತಿಳಿಸುತ್ತಾರೆ. ಅಕ್ಷರನಾಮಕನಾದ ಬ್ರಹ್ಮನು ಜ್ಞಾನದಿಂದ ಸಂಬಂಧಿತನಾಗುತ್ತಾನೆ. ಶ್ರೀಹರಿಯು ಜಗತ್ತನ್ನು ಸೃಷ್ಟಿಸುತ್ತೇನೆಂದು ವಿಚಾರಮಾಡಿದನು. ವಿಚಾರವುಳ್ಳವನಾದ್ದರಿಂದ ಶ್ರೀಹರಿಯು ಜಗತ್ತಾಗಿ ಪರಿಣಮಿಸಿದನೆಂದು ಹೇಳಲು ಸಾಧ್ಯವಿಲ್ಲ. ವಿಚಾರವಂತನಾದ ಶ್ರೀಹರಿಯಿಂದ ಅನ್ನ, ಅನ್ನಾಭಿಮಾನಿಗಳಾದ ದೇವತೆಗಳು ಹುಟ್ಟಿದರು. ಅನ್ನದಿಂದ ಪ್ರಾಣನು, ಮನಸ್ಸು, ಸತ್ಯಾಭಿಮಾನಿಗಳು, ಲೋಕಗಳು ಹುಟ್ಟಿದವು. ಆ ನಂತರ ಕರ್ಮಗಳು ಹುಟ್ಟಿದವು. ಕರ್ಮಗಳು ಹುಟ್ಟಲು ನಿಮಿತ್ತವಾಗಿ ಸ್ವರ್ಗಾದಿಫಲಗಳು ಹುಟ್ಟುತ್ತವೆ.

**ಮಂ ॥ ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ ।**
**ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ ॥ 9 ॥**

ಖಂಡಾರ್ಥ : ತಪಸಾ ಚೀಯತೇ ಇತ್ಯುಕ್ತ್ವಾ ಪ್ರಜ್ಞಾನಂ ವಿನಾ ಇತಿ ಪ್ರಾಪ್ತಶಂಕಾಂ ನಿರಸ್ಯನ್ ತಪಸ್ಸ್ವರೂಪೋಕ್ತಿಪೂರ್ವಂ ಪ್ರಥಮತಸ್ಸೃಷ್ಟಂ ಚಾಹ – ಯಸ್ಸರ್ವಜ್ಞ ಇತ್ಯಾದಿನಾ ॥ ಸರ್ವಂ ಜಾನಾತೀತಿ ಸರ್ವಜ್ಞಃ । ಸರ್ವಂ ವೇತ್ತೀತಿ ಸರ್ವವಿತ್ । ಜ್ಞಾನ – ವೇದನಯೋಸ್ಸಾಮಾನ್ಯವಿಶೇಷತ್ವೇನಾಪೌನರುಕ್ತ್ಯಮ್ । ಸರ್ವಂ ವಿಂದತೇ ಇತಿ ವಾ ಸರ್ವವಿತ್ । "ವಿದ್‌ಲೃ ಲಾಭ" ಇತಿ ಧಾತೋಃ ಕ್ವಿಪ್ । ಸರ್ವಂ ಲಭತೇ ಆಪ್ತಕಾಮ ಇತ್ಯರ್ಥಃ । ಹೇತುಗರ್ಭಮಿದಂ ದ್ವಯಮ್ । ಸರ್ವಜ್ಞತ್ವಾದಾಪ್ತಕಾಮತ್ವಾದ್ಯಸ್ಯ ತಪೋ ಜ್ಞಾನಮಯಂ ಜ್ಞಾನಾತ್ಮಕಂ ನಾಽಽಲೋಚನಾತ್ಮಕಂ, ನಾಪಿ ಸಂತಾಪಾತ್ಮಕಮಿತಿ । ಅಜ್ಞೋಹಿ ಆಲೋಚಯತಿ। ಅನಾಪ್ತಕಾಮಸ್ತು ತಪ್ಯತಿ । ನಿತ್ಯಸಿದ್ಧಸರ್ವವಿಷಯಕಮಪಿ ಜ್ಞಾನಂ ಸಿಸೃಕ್ಷಾರೂಪವಿಶೇಷಾತ್ಮನಾ ಕಾಲವಿಶೇಷೇ ವ್ಯಜ್ಯತೇ ಇತಿ । 'ತಪಸಾ ಚೀಯತೇ' ಇತಿ, 'ಸೋಽಕಾಮಯತ' ಇತಿ, 'ತದೈಕ್ಷತ' ಇತಿ, "ಸ ಈಕ್ಷಾಂಚಕ್ರೇ" 'ತಪಸ್ತಪ್ತ್ವಾ' ಇತ್ಯಾದಿರೂಪೇಣ ಶ್ರುತೀಷೂಚ್ಯತೇ ಇತಿ ಭಾವಃ । ತಸ್ಮಾತ್ ಸರ್ವಜ್ಞಾದ್ ಬ್ರಹ್ಮಣಃ

ನಾಮರೂಪಶಬ್ದಿತಶಬ್ದಪ್ರಪಂಚಾರ್ಥಪ್ರಪಂಚಾಭಿಮಾನಿತಯಾಽಭೇದೋಪಚಾರೇಣ ನಾಮರೂಪಮನ್ನಂ ಇತ್ಯುಕ್ತಮ್, ಏತತ್ ಬ್ರಹ್ಮ ಚತುರ್ಮುಖಾಖ್ಯಂ ಜಾಯತೇ ಇತ್ಯರ್ಥಃ ॥

ತಪಸ್ಸಿನಿಂದ ಸಂಬಂಧಿತನಾಗಿದ್ದಾನೆ ಎಂದು ಹೇಳಿದ ಮೇಲೆ, ಜ್ಞಾನವಿಲ್ಲದೆಯೂ ಮೋಕ್ಷವನ್ನು ಹೊಂದಬಹುದು ಎಂಬ ಶಂಕೆಯನ್ನು ನಿರಾಕರಿಸಿ, ತಪ ಶಬ್ದದ ಅರ್ಥವನ್ನು ತಿಳಿಸಿ, ಮೊದಲು ಸೃಷ್ಟವಾದ ಪದಾರ್ಥವನ್ನು ಹೇಳುತ್ತಾನೆ. ಎಲ್ಲವನ್ನೂ ತಿಳಿಯುವವನು ಸರ್ವಜ್ಞನು. ಜ್ಞಾನ ತಿಳಿವಳಿಕೆಗಳು ಸಾಮಾನ್ಯ ವಿಶೇಷವಾದ್ದರಿಂದ ಪುನರುಕ್ತಿಯು ಬರುವುದಿಲ್ಲ. ಸರ್ವವನ್ನು ಹೊಂದುತ್ತಾನಾದ್ದರಿಂದ ಸರ್ವವಿತ್. ಆಪ್ತಕಾಮನೆಂದರ್ಥ. ಸರ್ವಜ್ಞನಾದ್ದರಿಂದ ಆಪ್ತಕಾಮನಾದ್ದರಿಂದ ಅವನ ತಪಸ್ಸು ಜ್ಞಾನಮಯವು, ಆಲೋಚನಾತ್ಮಕವಲ್ಲ, ದುಃಖಕಾರಕವಲ್ಲ. ಅಜ್ಞನು ಆಲೋಚಿಸುತ್ತಾನಷ್ಟೇ. ಆಪ್ತಕಾಮನಾಗದವನು ತಪಿಸುತ್ತಾನೆ. ನಿತ್ಯಸಿದ್ಧನಾಗಿ, ಸರ್ವವಿಷಯನಾಗಿದ್ದರೂ ಜ್ಞಾನವು ಸೃಷ್ಟಿಮಾಡಬೇಕೆಂಬ ಕಾಲವಿಶೇಷದಲ್ಲಿ ವ್ಯಕ್ತವಾಗುತ್ತದೆ, ಎಂಬುದು "ತಪಸಾಚೀಯತೆ, ಸೋಽಕಾಮಯತ, ತದೈಕ್ಷತ, ಸ ಈಶಾಂಚಕ್ರೇ, ತಪಸ್ತಪ್ತ್ವಾ" ಎಂದು ಅನೇಕ ಶೃತಿಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಸರ್ವಜ್ಞನಾದ ಬ್ರಹ್ಮನ ದೆಸೆಯಿಂದ ನಾಮರೂಪಾತ್ಮಕವಾದ ಅನ್ನ (ಅನ್ನಾಭಿಮಾನಿ ದೇವತೆಗಳು) ಹಾಗೂ ಈ ಚತುರ್ಮುಖ ಬ್ರಹ್ಮದೇವರು ಹುಟ್ಟಿದರು.

## ಇತಿ ಪ್ರಥಮಃ ಖಂಡಃ

# ಅಥ ದ್ವಿತೀಯಃ ಖಂಡಃ

ಮಂ ॥ ತದೇತತ್ ಸತ್ಯಮ್ । ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂಸ್ತಾನಿ ತ್ರೇತಾಯಾಂ ಬಹುಧಾ ಸಂತತಾನಿ । ತಾನ್ಯಾಚರಥ ನಿಯತಂ ಸತ್ಯಕಾಮಾ ಏಷ ವಃ ಪಂಥಾ ಸುಕೃತಸ್ಯ ಲೋಕೇ ॥ 1 ॥

ಖಂಡಾರ್ಥ : ಕರ್ಮದೇವತಾದಿ ಜ್ಞಾನಂ ಯಜ್ಞಾನಾರ್ಥಂ ಸದನಲ್ಪಾಸ್ಥಿರಫಲವದ್ಭವತಿ ತನ್ಮೇ ಬ್ರೂಹೀತಿ ಪೃಷ್ಟವಂತಂ ಶೌನಕಂ ಪ್ರತಿ ಅಂಗಿರಾ ಬ್ರಹ್ಮಜ್ಞಾನಾರ್ಥಂ ಸತ್ತಾದೃಶಫಲವದ್ಭವತೀತಿ ಭಾವೇನ ಬ್ರಹ್ಮಸ್ವರೂಪಂ ಲೇಶೇನ ನಿರೂಪ್ಯ ಇದಾನೀಂ ಯಜ್ಞಾನಾರ್ಥಂ ಸದಿತ್ಯುಕ್ತಂ ತಜ್ಞಾನಾರ್ಥತ್ವಪ್ರಕಾರಮಾಹ – ತದೇತತ್ಸತ್ಯಮಿತ್ಯಾದಿನಾ ॥ ತದೇತತ್ಪರವಿದ್ಯಾ – ವಿಷಯತಯಾಽದೃಶ್ಯತ್ವಾದಿಗುಣಕತಯೋಕ್ತಮಕ್ಷರಂ ಸತ್ಯಮಪರಾಧೀನಸ್ವರೂಪಂ ಸರ್ವಸತ್ಯತಾಪ್ರದಂ ಚೇತ್ಯರ್ಥಃ । ಕವಯೋ ಜ್ಞಾನಿನೋ ಮಂತ್ರೇಷು ಯಾನಿ ಕರ್ಮಾಣಿ ಸಮಾಧೌ ಮನಸಾ ಅಪಶ್ಯನ್ ತಾನಿ ತ್ರೇತಾಯಾಂ ತ್ರೇತಾಯುಗೇ ಬಹುಧಾ ಸಂತತಾನಿ ಕೃತಯುಗ ಇವ ವಿಷ್ಣ್ವೇಕವಿಷಯಕಾಣಿ ನಾಸನ್ । ಕಿಂತು 'ತ್ರೇತಾದೌ ತದಶಕ್ತ್ಯಾ ಹಿ ಧರ್ಮೋಽನ್ಯ ಸಂಪ್ರವರ್ತತೇ' ಇತಿ, 'ಪೃಥಕ್ ಪೃಥಕ್ ಚ ತ್ರೇತಾಯಾಂ ಯಜಂತೇ ದೇವತಾಗಣಾನ್' ಇತಿ ಚ ಸ್ಮೃತ್ಯಾ ಕೃತಯುಗೇ ಇವ ವಿಷ್ಣ್ವೇಕನಿಷ್ಠತಾಂ ವಿನಾ ನಾನಾಪ್ರಕಾರೇಣ ತತ್ತದ್ದೇವತೋದ್ದೇಶೇನ ಕೃತ್ವಾಽಂತೇ ವಿಷ್ಣಾವರ್ಪಯಂತೀತಿ ಬಹುಧಾ ಪ್ರವರ್ತಿತಾನ್ಯಾಸನ್ ಇತ್ಯರ್ಥಃ । ಸತ್ಯಕಾಮಾಸ್ಸತ್ಯಾಖ್ಯ ಭಗವಜ್ಞಾನಕಾಮಾಸಂತೋ ಯೂಯಂ ತಾನಿ ಕರ್ಮಾಣಿ ನಿಯತಂ ಯಥಾ ಭವತೀ ತಥಾಽಽಚರಥಾನುಷ್ಠಿತ । ತಥಾಹಿ – ಕರ್ಮದೇವಾತಾದಿ ಜ್ಞಾನಂ 'ಉತ್ಕ್ರಮಿಷ್ಯತೇ ಏವಂಭಾವಾದಿತ್ಯೌಡುಲೋಮಿಃ' ಇತ್ಯಾದಿ ಸೂತ್ರೋಕ್ತದಿಶಾ ತದನುಷ್ಠಾನೇನ ಅಂತಃಕರಣಶುದ್ಧಿದ್ವಾರಾ ಬ್ರಹ್ಮಜ್ಞಾನಹೇತುಶ್ರವಣಾದ್ಯಂಗಂ ಸದ್ ಬ್ರಹ್ಮಜ್ಞಾನಂ ಜನಯಿತ್ವಾ ಅನಂತಫಲವದ್ಭವತಿ । ಅಪರಮಮುಖ್ಯವೃತ್ತ್ಯಾ ಕರ್ಮದೇವತಾದಿಸ್ವರೂಪಪ್ರತಿಪಾದಕಮಪಿ ಋಗಾದಿಕಂ ಪರಮಮುಖ್ಯವೃತ್ತ್ಯಾಽಕ್ಷರ– ಬೋಧಕತ್ವೇ ಪರವಿದ್ಯೈವ ಭವತೀತಿ ಭಾವೇನಾಹ – ಏಷ ವ ಇತಿ ॥ ಏಷಃ ಭಗವಜ್ಞಾನೋದ್ದೇಶಕಃ ಕರ್ಮಾಚಾರೋ, ವೋ ಯುಷ್ಮಾಕಂ ಸುಕೃತಸ್ಯ ಲೋಕೇ ಲೋಕಸ್ಯ ಪಂಥಾ ಮಾರ್ಗ ಇತ್ಯರ್ಥಃ । ಆಚರಥೇತಿ ಬಹುವಚನ ಉಕ್ತ್ಯಾ ಪೃಷ್ಟಾ ಶೌನಕಃ ಉಪಲಕ್ಷಣಮಿತಿ ಸೂಚಿತಮ್ ॥

ಕರ್ಮದೇವತೆಗಳ ಜ್ಞಾನವು, ಯಾವ ಜ್ಞಾನವುಳ್ಳದ್ದಾದರೆ ಶಾಶ್ವತಬಹುಫಲಕ ವಾಗುತ್ತದೆ, ಅದನ್ನು ನನಗೆ ಹೇಳಿರಿ ಎಂದು ಪ್ರಶ್ನಿಸಿದ ಶಾಸಕರನ್ನು ಕುರಿತು ಅಂಗಿರಾ ಋಷಿಗಳು ಬ್ರಹ್ಮಜ್ಞಾನವಿದ್ದರೆ ಮಾತ್ರ ಅವುಗಳು ಶಾಶ್ವತಬಹುಫಲಕವಾಗುತ್ತವೆ ಎಂದು ಬ್ರಹ್ಮ ಸ್ವರೂಪವನ್ನು ಸಂಕ್ಷಿಪ್ತವಾಗಿ ನಿರೂಪಿಸಿ, ಈಗ ಆ ಜ್ಞಾನದ ಪ್ರಕಾರವನ್ನು ಹೇಳುತ್ತಾರೆ.

ಪರವಿದ್ಯಾವಿಷಯನಾದ, ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಮಕನಾದ ಶ್ರೀಹರಿಯು ಸ್ವತಂತ್ರನು, ಸರ್ವಸತ್ತಾಪ್ರದನು. ಜ್ಞಾನಿಗಳು ಮಂತ್ರಗಳಲ್ಲಿ, ಕರ್ಮಗಳಲ್ಲಿ, ಸಮಾಧಿಯಲ್ಲಿ ಮನಸ್ಸಿನಿಂದ ತಿಳಿಯುತ್ತಾರೆಯೋ, ಅವುಗಳು ತ್ರೇತಾಯುಗದಲ್ಲಿ ಕೃತಯುಗದಂತೆ ವಿಷ್ಣು ಮಾತ್ರ ವಿಷಯಕವಾಗಲಿಲ್ಲ.

**"ತ್ರೇತಾದೌ ತದಶಕ್ತ್ಯಾಹಿ ಧರ್ಮೋಽನ್ಯ ಸ್ಸಂಪ್ರವರ್ತತೆ,**
**ಪೃಥಕ್ ಪೃಥಕ್ ಚ ತ್ರೇತಾಯಾಂ ಯಜಂತೇ ದೇವತಾಗಣಾನ್"**

ಎಂಬ ಸ್ಮೃತಿಗನುಸಾರವಾಗಿ ನಾನಾ ಪ್ರಕಾರಕವಾಗಿ, ಆ ದೇವತೆಗಳ ಉದ್ದೇಶದಿಂದ ಯಜ್ಞಾದಿಗಳನ್ನು ಅನುಸರಿಸಿ ಅಂತ್ಯದಲ್ಲಿ ಶ್ರೀಹರಿಯಲ್ಲಿ ಅರ್ಪಿಸುತ್ತಾ, ಯಜ್ಞಾದಿಗಳಲ್ಲಿ ಪ್ರವೃತ್ತರಾಗುತ್ತಾರೆ. ಸತ್ಯಾನಾಮಕ ಭಗವಂತನ ಜ್ಞಾನವನ್ನು ಇಚ್ಛಿಸುವ ಸಜ್ಜನರು, ಆ ಕರ್ಮಗಳನ್ನು ನಿಯಮೇನ ಆಚರಿಸಿರಿ. ಕರ್ಮದೇವತಾದಿಗಳ ಜ್ಞಾನವು "ಉತ್ಕೃಮಿಷ್ಯತ ಏವಂಭಾವಾತ್ ಇತಿ ಔಡುಲೋಮಿಃ" ಎಂಬ ಸೂತ್ರದಲ್ಲಿ ತಿಳಿಸಿದಂತೆ ಆ ಕರ್ಮಗಳ ಅನುಷ್ಠಾನದಿಂದ ಅಂತಃಕರಣ ಶುದ್ಧಿದ್ವಾರಾ ಬ್ರಹ್ಮಜ್ಞಾನಕ್ಕೆ ಕಾರಣವಾದ ಶ್ರವಣಾದಿಗಳಿಗೆ ಸಹಕಾರಿಯಾಗಿ ಬ್ರಹ್ಮಜ್ಞಾನವನ್ನು ಹುಟ್ಟಿಸಿ ಅನಂತಫಲದಾಯಕ ವಾಗುತ್ತವೆ. ಅಪರಮುಖ್ಯವೃತ್ತಿಯಿಂದ ಕರ್ಮದೇವತೆಗಳನ್ನು ತಿಳಿಸುವ ಋಗಾದಿವೇದಗಳೇ, ಪರಮಮುಖ್ಯ ವೃತ್ತಿಯಿಂದ ಶ್ರೀಹರಿ ಬೋಧಕವಾಗಿ ಪರವಿದ್ಯೆಯಾಗುತ್ತದೆ ಎಂದು ಹೇಳುತ್ತಾರೆ. ಭಗವತ್‌ಜ್ಞಾನೋದ್ದೇಶಕವಾದ ಕರ್ಮಾಚಾರಗಳು, ನಿಮಗೆ ಮೋಕ್ಷಕ್ಕೆ ಮಾರ್ಗವು ಆಗುತ್ತವೆ. ಇಲ್ಲಿ ಆಚರಥ ಎಂಬ ಬಹುವಚನ ಪ್ರಯೋಗದಿಂದ ಕೇಳುವವರು ಬರೇ ಶೌನಕರಷ್ಟೇ ಅಲ್ಲ ಬೇರೆ ಋಷಿಗಳೂ ಇದ್ದಾರೆಂದು ತಿಳಿಸುತ್ತದೆ.

ಮಂ ॥ ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ ।
ತದಾಽಽಜ್ಯಭಾಗಾವಂತರೇಣಾಹುತೀಃ ಪ್ರತಿಪಾದಯೇತ್ ॥ 2 ॥

ಖಂಡಾರ್ಥ : ಕರ್ಮಾಚರಣಪ್ರಕಾರಮಾಹ – ಯದೇತ್ಯಾದಿನಾ ॥ ಲೇಲಾಯತೇ ಪರಿವರ್ತತೇ । ಅರ್ಚಿರ್ಜ್ವಾಲಾ । ಸಮಿದ್ಧೇ, "ಇಂಧೀ ದೀಪ್ತೌ", ಸಮ್ಯಕ್ ದೀಪ್ಯಮಾನೇ ಇತ್ಯರ್ಥಃ । ಆಜ್ಯಭಾಗಾವಂತರೇಣ ಆಜ್ಯಭಾಗಯೋರ್ಮಧ್ಯೇ ಆಹುತೀಃ ಪ್ರಧಾನ-ಹೋಮಾನ್ ಪ್ರತಿಪಾದಯೇತ್ ಕುರ್ಯಾತ್ ತದಾ ಏಷಃ ಕರ್ಮಾಚಾರಸ್ಸುಕೃತಸ್ಯ ಪಂಥಾ ಇತಿ ಯೋಜನಾ । ಆಜ್ಯಭಾಗಾಖ್ಯಹೋಮೌ ಪಾರ್ಶ್ವಯೋಃ ಕೃತ್ವಾ ಮಧ್ಯೇ ಹೋಮಾಃ ಕಾರ್ಯಾ ಇತ್ಯರ್ಥಃ ॥

ಕರ್ಮಾಚರಣೆಯ ಪ್ರಕಾರವನ್ನು ತಿಳಿಸುತ್ತಾರೆ. ಯಾವಾಗ, ಚೆನ್ನಾಗಿ ಜ್ವಲಿಸುವಂತಹ, ಆಜ್ಯಭಾಗಗಳ ಮಧ್ಯದಲ್ಲಿ ಪ್ರಧಾನಹೋಮದ ಆಹುತಿಗಳನ್ನು ಹಾಕುತ್ತಾನೆ. ಆಗ ಆ ಕರ್ಮವು ಸುಕೃತಲೋಕಕ್ಕೆ ಮಾರ್ಗವಾಗುತ್ತದೆ.

ಮಂ ॥ ಯಸ್ಯಾಗ್ನಿಹೋತ್ರಮದರ್ಶಪೌರ್ಣಮಾಸಮನಾಗ್ರಯಣ-
ಮತಿಥಿವರ್ಜಿತಂ ಚ। ಅಹುತಮವೈಶ್ವದೇವಮವಿಧಿನಾ ಹುತಮಾಸಪ್ತ-
ಮಾಂಸ್ತಸ್ಯ ಲೋಕಾನ್ ಹಿನಸ್ತಿ ॥3॥

ಖಂಡಾರ್ಥ : ಅಗ್ನೌ ಕ್ರಿಯಮಾಣಕರ್ಮಣಃ ಇತಿ ಕರ್ತವ್ಯತಾಂ ವಿಪಕ್ಷೇಽನರ್ಥಕಥನೇನಾಹ – ಯಸ್ಯೇತಿ ॥ ಯಸ್ಯ ಪುರುಷಸ್ಯ ಅಗ್ನಿಹೋತ್ರಂ ದರ್ಶಪೌರ್ಣಮಾಸಾಗ್ರಯ-ಣಾಖ್ಯೇಷ್ಟಿತ್ರಯಾನುಷ್ಠಾನರಹಿತಮಹುತಂ ಕಾಲೇ ಹುತಂ ನ ಭವತೀ, ಅವೈಶ್ವದೇವಂ ವೈಶ್ವದೇವಕರ್ಮರಹಿತಂ, ಅವಿಧಿನಾ ಹುತಂ ಚ ತಸ್ಯ ತತ್ಕರ್ಮ ಆಸಪ್ತಮಾನ್ ಭೂಲೋಕಮಾರಭ್ಯ ಸಪ್ತಮಭೂತಸತ್ಯಲೋಕಪರ್ಯಂತಾನ್ ಲೋಕಾನ್, ಭುವರ್ಲೋಕಮಾರಭ್ಯ ಸಪ್ತಮಭೂತ ವೈಕುಂಠಲೋಕಪರ್ಯಂತಾನಿತಿ ವಾ, ಹಿನಸ್ತೀ ಹಿಂಸಿ ಹಿಂಸಾಯಾಂ ನಾಶಯತಿ, ಊರ್ಧ್ವಲೋಕಾಸ್ತಸ್ಯ ನ ಭವಂತೀತ್ಯರ್ಥಃ । ಅತೋ ದರ್ಶಪೌರ್ಣಮಾಸಾದಿಕಮಾಹಿತಾಗ್ನಿನಾ ಕಾಲೇ ಕಾಲೇ ಕಾರ್ಯಮಿತಿ ಭಾವಃ ॥

ಅಗ್ನಿಯಲ್ಲಿ ಮಾಡುವ ಕರ್ಮಗಳಿಗೆ ಇತಿಕರ್ತವ್ಯವಾದುದನ್ನು, ಅದನ್ನು ಮಾಡದಿದ್ದರೆ ಬಾಧಕಮುಖವಾಗಿ ತಿಳಿಸುತ್ತಾರೆ. ಯಾವ ಪುರುಷನಿಂದ ಮಾಡಲ್ಪಟ್ಟ ಅಗ್ನಿಹೋತ್ರವು,

ದರ್ಶಪೌರ್ಣಮಾಸ ಆಗ್ರಾಯಣವೆಂಬ ಮೂರು ಇಷ್ಟಿಗಳಿಂದ ರಹಿತವಾಗಿದೆಯೋ, ಅಂದರೆ ಸಕಾಲದಲ್ಲಿ ಹೋಮಿಸದಿದ್ದರೆ, ವೈಶ್ವದೇವಕರ್ಮರಹಿತವಾಗಿದ್ದರೆ, ವಿಧಿಗನುಸಾರವಾಗಿ ಹೋಮಿಸದಿದ್ದರೆ, ಆ ಕರ್ಮವು ಭೂಲೋಕವನ್ನು ಆರಂಭಿಸಿ ಸತ್ಯಲೋಕಪರ್ಯಂತರವಾಗಿ ಸಪ್ತಲೋಕಗಳನ್ನು ಅಥವಾ ಭುವರ್ಲೋಕವನ್ನು ಆರಂಭಿಸಿ ವೈಕುಂಠಲೋಕಪರ್ಯಂತರವಾಗಿ ಸಪ್ತಲೋಕಗಳನ್ನು ನಾಶಮಾಡುತ್ತದೆ. ಅಂದರೆ ಅವನಿಗೆ ಈ ಲೋಕಗಳ ಪ್ರಾಪ್ತಿಯು ಆಗುವುದಿಲ್ಲ. ಆದ್ದರಿಂದ ಈ ಕರ್ಮಗಳನ್ನು ಕಾಲಕಾಲಕ್ಕೆ ಅನುಷ್ಠಾನ ಮಾಡಬೇಕು.

**ಮಂ ॥ ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ । ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯ-ಮಾನಾ ಇತಿ ಸಪ್ತ ಜಿಹ್ವಾಃ ॥4॥**

**ಮಂ ॥ ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾಹುತಯೋ ಹ್ಯಾದದಾಯನ್ । ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥5॥**

ಖಂಡಾರ್ಥ : ಕುತ್ರ ಹೋತವ್ಯಮಿತ್ಯಪೇಕ್ಷಾಯಾಂ ಯದಾ ಲೇಲಾಯತೇ ಇತ್ಯುಕ್ತಮಧಿಕರಣಂ ವಿವೃಣೋತಿ – ಕಾಲೀತಿ ॥ ವಿಶ್ವರುಚಿ ಚ ದೇವೀತ್ಯೇಕಾ, ಭ್ರಾಜಮಾನೇಷು, ದೀಪ್ಯಮಾನೇಷು ಏತೇಷು ಏತಾಸು ಜಿಹ್ವಾಸು ವ್ಯತ್ಯಯಾತ್, ಯಥಾಕಾಲಮಾಹುತಯಃ ಆಹುತೀಃ ಹೂಯಮಾನಹವೀಂಷಿ ಆದದಾಯನ್ ಆದದಾನೋ ಯಶ್ಚರತೇ ಕರ್ಮ ಕುರುತೇ, ಯದ್ವಾ ಚರತೇ ಇತ್ಯಸ್ಯ ವಿವರಣಂ-ಯಥಾಕಾಲಂ ಕಾಲಮನತಿಕ್ರಮ್ಯ ಆಹುತಯಃ ಆಹುತೀಃ ಆದದಾಯನ್ ಆದದಾನಃ ಕುರ್ವನ್ನಿತಿ ಯಾವತ್ । ಯಥಾಕಾಲಂ ಸತ್ಯಜ್ಞಾನಕಾಮನಯೋಕ್ತಸ್ಥಾನೇಷು ಹೋತುಃ ಫಲಮಾಹ – ತಮಿತಿ ॥ ಏತಾ ಏತೇ ಪ್ರಸಿದ್ಧಾಃ ಸೂರ್ಯಸ್ಯ ರಶ್ಮಯಃ ರಶ್ಮಿಷು ಸ್ಥಿತಾ ದೇವಾಃ ದೇವಾನಾಂ ಪತಿರೇಕೋಮುಖ್ಯಃ ಅಧಿವಾಸೋಽಧಿವಸಂತ್ಯತ್ರೇತ್ಯಧಿವಾಸೋ ಮುಖ್ಯಾಶ್ರಯೋ ಯತ್ರ ತಿಷ್ಠತಿ ತತ್ರ ತಂ ನಯಂತೀತಿ ।

ಎಲ್ಲಿ ಹೋಮಿಸಬೇಕೆಂದು ಹೇಳಿದಾಗ ಆ ಕರ್ಮಕ್ಕೆ ಅಧಿಷ್ಠಾನವನ್ನು ಹೇಳುತ್ತಾರೆ. ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ವಿಶ್ವರುಚೀ ಎಂಬ ದೇವಿಯು ಪರಿವರ್ತಿತಳಾಗಿ ಜಿಹ್ವೆಗಳುಳ್ಳವಳು ಪ್ರಕಾಶಮಾನವಾದ ಈ ಏಳು ಜಿಹ್ವೆಗಳಲ್ಲಿ ಯಥಾಕಾಲದಲ್ಲಿ ಹವಿಸ್ಸುಗಳನ್ನು ಕೊಡುವವನಾಗಬೇಕು.

ಸರಿಯಾದ ಕಾಲಗಳಲ್ಲಿ ಹೋಮಿಸುವವರಿಗೆ ಆಗುವ ಫಲಗಳನ್ನು ಹೇಳುತ್ತಾರೆ. ಪ್ರಸಿದ್ಧರಾದ ಸೂರ್ಯನ ರಶ್ಮಿಗಳಲ್ಲಿ ಇರುವ ದೇವತೆಗಳು ದೇವತೆಗಳಿಗೆ ಮುಖ್ಯನಾದ, ದೇವತೆಗಳಿಗೆ ಮುಖ್ಯವಾಗಿ ಆಶ್ರಯನಾದವನು ಎಲ್ಲಿರುತ್ತಾನೆಯೋ ಅಲ್ಲಿಗೆ ಈ ಯಜ್ಞಗಳನ್ನು ಮಾಡುವವನನ್ನು ಕರೆದುಕೊಂಡು ಹೋಗುತ್ತಾರೆ.

**ಮಂ ॥ ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿ-ಭಿರ್ಯಜಮಾನಂ ವಹಂತಿ । ಪ್ರಿಯಾಂ ವಾಚಮಭಿವದಂತ್ಯೋಽರ್ಚ-ಯಂತ್ಯ ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥ 6 ॥**

ಖಂಡಾರ್ಥ : ನಯನಪ್ರಕಾರಮೇವಾಹ – ಏಹ್ಯೇಹೀತಿ ॥ ಆಹುತಯಃ ಆಹೂಯಮಾನಾಃ ಸ್ವೀಕೃತಹವಿರ್ಭಾಗಾಃ ಇತಿ ಯಾವತ್, ಸುವರ್ಚಸಃ ಶೋಭನವರ್ಚಸ್ಕಾಃ ದೇವಾಃ ಸ್ವಾಧಿಷ್ಠಾನಭೂತೈಸ್ಸೂರ್ಯಸ್ಯ ರಶ್ಮಭಿರ್ಯಜಮಾನಂ ವಹಂತಿ । ಕಥಮ್? ಏಷಃ ವಃ ಪುಣ್ಯಃ ಪುಣ್ಯಸಾಧ್ಯಃ ತಸ್ಯ ವಿವರಣಮ್ ಸುಕೃತಃ ಬ್ರಹ್ಮಲೋಕಃ ಪರಬ್ರಹ್ಮಲೋಕಃ ಇತಿ ಪ್ರಿಯಾಂ ವಾಚಮಭಿವದಂತ್ಯೋಽಭಿವದಂತಃ ಅರ್ಚಯಂತ್ಯಃ ಪೂಜಯಂತಃ ವಹಂತೀತಿ ॥

ಆಹುತಿಗಳನ್ನು ಸ್ವೀಕರಿಸಿದ, ಬಹಳವರ್ಚಸ್ವಿಗಳಾದ ದೇವತೆಗಳು, ಅಧಿಷ್ಠಾನರಾದ ಸೂರ್ಯನ ರಶ್ಮಿಗಳಿಂದ ಯಜಮಾನನನ್ನು ನೀನು ಪುಣ್ಯಸಾಧ್ಯವಾದ ಬ್ರಹ್ಮಲೋಕ, ಅಥವಾ ಪರಬ್ರಹ್ಮಲೋಕವು ಎಂದು ಪ್ರೀತ್ಯಾಸ್ಪದವಾದ ಮಾತುಗಳನ್ನು ಹೇಳುತ್ತಾ, ಅವನನ್ನು ಅರ್ಚಿಸುತ್ತಾ ಕರೆದುಕೊಂಡು ಹೋಗುತ್ತಾರೆ.

**ಮಂ ॥ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ । ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ ಜರಾಮೃತ್ಯುಂ ತೇ ಪುನರೇವಾಪಿಯಂತಿ ॥ 7 ॥**

ಖಂಡಾರ್ಥ : ಸತ್ಯವಿಷಯತ್ವೇನ ಕೃತಕರ್ಮಣಾಮಕ್ಷಯಫಲಮುಕ್ತ್ವಾ ತದವಿಷಯತ್ವೇನ ಕೃತಕರ್ಮಣಾಮನಿಷ್ಟಫಲಮಾಹ – ಪ್ಲವಾ ಇತಿ ॥ ಏತೇ ಭಗವದವಿಷಯತ್ವೇನಾನುಷ್ಠಿತಾಃ ಯಜ್ಞರೂಪಾ ಯಜ್ಞಸ್ಯ ರೂಪಮಿವ ರೂಪಂ ಯೇಷಾಂ ತೇ, ವಿದ್ಯುಕ್ತ-ಯಜ್ಞವದವಭಾಸಮಾನಾ ಇತಿ ಯಾವತ್, ಅಧೃಢಾಃ ಪ್ಲವಾಃ, ಲುಪ್ತೋಪಮಾನಂ, ಯಥಾಽಧೃಢಪ್ಲವೇನ ಮಹಾನದ್ಯಾದಿಕಂ ತರನ್ನಾಪದಮಾಪ್ನೋತಿ ತಥೈವಂವಿಧಯಜ್ಞೈ-ರಾಪದಮೇವಾಪ್ನೋತಿ ನ ಶ್ರೇಯಃ ಇತಿ। ತದೇವಾಹ ಅಷ್ಟಾದಶೇತಿ ॥ ಯೇಷು ಯಜ್ಞೇಷು ಅಷ್ಟಾದಶಾನಾಂ ಪುರುಷಾಣಾಮುಕ್ತಮುಷ್ಟಾದಶೋಕ್ತಂ, ಭಗವದವಿಷಯತ್ವ-ಹೇತುನಾಽವರಮಪಕೃಷ್ಟಮೇತತ್ಕರ್ಮ ಶ್ರೇಯಃ ಶ್ರೇಯಸ್ಸಾಧನಂ ಮತ್ವಾ ಯೇ ಮೂಢಾಃ ಅಭಿನಂದಂತೀ ಮೋದಂತೇ ತೇ ಜರಾಮೃತ್ಯುಂ, ದ್ವಂದ್ವೈಕವದ್ಭಾವಃ ಪುನರೇವಾಪಿಯಂತೀ ಪ್ರಾಪ್ನುವಂತಿ। ಪೂರ್ವಂ ಜರಾಮೃತ್ಯುಮತಾಮಪಿ ಪುನಃ ಪುನಃ ತತ್ಪ್ರಾಪ್ತಿರೇವ ಭವತಿ, ನ ಕದಾಽಪಿ ತನ್ನಿವೃತ್ತಿರಿತಿ ಭಾವಃ। ಅಷ್ಟಾದಶಮುಷಾಸ್ತು ಷೋಡಶ ಋತ್ವಿಜಾಃ, ಯಜಮಾನ ಏಕಸ್ತನ್ನಿರೀಕ್ಷಕಸ್ಸಭ್ಯ ಏಕಃ ಇತಿ ಧ್ಯೇಯಮ್ ॥

ಭಗವಂತನನ್ನು ವಿಷಯೀಕರಿಸಿದ ಸತ್ಕರ್ಮಗಳಿಗೆ ಮೋಕ್ಷಫಲವನ್ನು ಹೇಳಿ ಭಗವದ್ವಿಷಯವಾಗದ ಕರ್ಮಗಳಿಗೆ ಅನಿಷ್ಟಫಲವನ್ನು ಹೇಳುತ್ತಾರೆ. ಭಗವದ್ವಿಷಯವಾಗದೇ ಇರುವ ಕರ್ಮಗಳು, ವಿದ್ಯುಕ್ತವಾದ ಯಜ್ಞಗಳಂತೆ ತೋರುವ, ಆ ಕರ್ಮಗಳು, ಧೃತವಿಲ್ಲದ ನಾವೆಯಿಂದ ಆಳವಾದ ಸಮುದ್ರವನ್ನು ದಾಟುವ ಕಾಲದಲ್ಲಿ ಹೇಗೆ ಆಪತ್ತಿನಲ್ಲಿ ಸಿಕ್ಕಿಕೊಳ್ಳುತ್ತೇವೇಯೋ, ಅದೇ ರೀತಿಯಲ್ಲಿ ಈ ಕರ್ಮಗಳಿಂದ ಅನರ್ಥವನ್ನೇ ಹೊಂದುತ್ತೇವೆ. ಹದಿನೆಂಟು ಪುರುಷರುಗಳಿಂದ ಭಗವದ್ವಿಷಯವಾಗಿಲ್ಲವಾದ್ದರಿಂದ ಅವರದಾದ ಈ ಕರ್ಮಗಳು ಶ್ರೇಯಸ್ಸಿಗೆ ಸಾಧನವೆಂದು ತಿಳಿದ ಮೂಢರು, ಈ ಯಜ್ಞಗಳನ್ನು ಮಾಡಿ, ಸಂತೋಷಪಡುತ್ತಾರೆ. ಆದರೆ ಅವರುಗಳು ಈ ಸಂಸಾರದಲ್ಲಿ ಜರಾಮರಣಗಳನ್ನು ಪುನಃ ಪುನಃ ಹೊಂದುತ್ತಾರೆ. ಪೂರ್ವದಲ್ಲಿಯೂ ಜರಾಮರಣಗ್ರಸ್ತರಾದವರು ಪುನಃ ಪುನಃ ಅದನ್ನೇ ಹೊಂದುತ್ತಾ, ಸಂಸಾರದಿಂದ ನಿವೃತ್ತರಾಗುವುದಿಲ್ಲ. ಹದಿನಾರು ಜನರು ಋತ್ವಿಗರು, ಒಬ್ಬ ಯಜಮಾನ, ಒಬ್ಬ ನಿರೀಕ್ಷಕನೆಂದು ಹದಿನೆಂಟು ಜನರನ್ನು ತಿಳಿಯಬೇಕು.

**ಮಂ ॥ ಅವಿದ್ಯಾಯಾಮಂತರೇ ವೇಷ್ಟ್ಯಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ । ಜಂಘನ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥ 8 ॥**

ಖಂಡಾರ್ಥ : ತೇಷಾಂ ಭಗವದವಿಷಯತ್ವೇನಾನುಷ್ಠಾನೇ ಕಿಂ ಬೀಜಮಿತ್ಯತ ಆಹ – ಅವಿದ್ಯಾಯಾಮಿತಿ ॥ ಅಂತರೇ ಮಧ್ಯೇ ವೇಷ್ಟ್ಯಮಾನಾಃ ಪರಿತೋ ಬಧ್ಯಮಾನಾಃ ಅತ್ಯಂತಮವಿದ್ಯಾತಿರೋಹಿತತತ್ವಜ್ಞಾನಾ ಇತ್ಯರ್ಥಃ । ಸ್ವಯಂಧೀರಾಃ ಸ್ವಾತ್ಮೋತ್ಪ್ರೇಕ್ಷಿತ ಪ್ರಜ್ಞಾವಂತಃ । ಅಪಂಡಿತಾಸ್ಸಂತಃ ಅಪಿ ಪಂಡಿತಮಾತ್ಮಾನಂ ಮನ್ಯಮಾನಾಃ । ಜಘನ್ಯಮಾನಾಃ "ಹನ ಹಿಂಸಾಗತ್ಯೋಃ" ವಕ್ರಗತಯಃ । ಅಂಧೇನ ನೀಯಮಾನಾ ಅಂಧಾ ಯಥಾ ಭಿನ್ನಮಾರ್ಗಾ ಏವಮಿತ್ಯರ್ಥಃ ॥

ಅವರುಗಳು ಈ ರೀತಿಯಲ್ಲಿ ಭಗವದ್ವಿಷಯಕವಾಗದ ರೀತಿಯಲ್ಲಿ ಯಾಕೆ ಅನುಷ್ಠಾನ ಮಾಡುತ್ತಾರೆಂದು ತಿಳಿಸುತ್ತಾರೆ. ಬಹಳ ಅವಿದ್ಯೆಯಿಂದ ಕೂಡುವವರಾಗಿ, ಅದರಿಂದ ಬಂಧಿತರಾಗಿ, ನಾವೇ ಪಂಡಿತರೆಂದು ತಿಳಿದುಕೊಂಡು, ಪಂಡಿತರಾಗದೇ ಇದ್ದರೂ ಪಂಡಿತರೆಂದು ತಿಳಿಯುತ್ತಾ ವಕ್ರವಾದ ಗತಿಯುಳ್ಳವರಾಗಿ, ಕುರುಡ ಮಾರ್ಗದರ್ಶನದಿಂದ ಮುಂದೆ ಸಾಗುವ ಕುರುಡನಂತೆ, ಇವನೂ ಸಹ ಭಿನ್ನವಾದ ಮಾರ್ಗದಲ್ಲಿ ಹೋಗುತ್ತಾನೆ.

**ಮಂ ॥ ಅವಿದ್ಯಾಯಾಂ ಬಹುಧಾ ವರ್ತಮಾನಾಃ ಸ್ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ । ಯತ್ಕರ್ಮಿಣೋ ನ ಪ್ರವೇದಯಂತಿ ರಾಗಾತ್ತೇನಾऽऽತುರಾಃ ಕ್ಷೀಣಲೋಕಾಶ್ಚ್ಯವಂತೇ ॥ 9 ॥**

ಖಂಡಾರ್ಥ : ಅವಿದ್ಯಾವೇಷ್ಟನಂ ಚ ನೈಕಪ್ರಕಾರಮಿತ್ಯಾಹ – ಅವಿದ್ಯಾಯಾಮಿತಿ ॥ ಬಾಲಾಃ ಪ್ರಜ್ಞಾಹೀನಾಃ । ಕುತಸ್ತೇಷಾಮವಿದ್ಯಾವೇಷ್ಟನೇನ ಭಗವತ್ಪ್ರಜ್ಞಾಹೀನತಾ ಇತ್ಯತ ಆಹ ॥ ಯತ್ಕರ್ಮಿಣಃ ಇತಿ ॥ ಯದ್ಯಸ್ಮಾತ್ಸ್ವರ್ಗಾದಿಕ್ಷಯಿಷ್ಣುಫಲೇ ರಾಗಾನ್ನಿಮಿತ್ತಾತ್ ಕರ್ಮಿಣಃ ಕರ್ಮಾನುಷ್ಠಾತಾರಃ ತೇನ ಕಾರಣೇನ ನ ಪ್ರವದೇಯಂತಿ ಸಂಯಕ್ ನ ಜಾನಂತಿ ಭಗವಂತಮ್ । ಸ್ವಾರ್ಥೇ ಣಿಚ್ ಸರ್ವೇಭ್ಯೋ ರಾಜಾದಿವತ್ಕಿಂಚಿದುತ್ತಮತ್ವೇನ ವಾ, ಸರ್ವಸಮತ್ವೇನ ಹೀನತ್ವೇನ ವಾ ಜಾನಂತೀತಿ ಪ್ರಶಬ್ದಾರ್ಥಃ । ತೇನ ಹೇತುನಾऽऽತುರಾಃ

ವ್ಯಗ್ರಚಿತ್ತಾಸ್ಸಂತಃ ಕ್ಷೀಣಲೋಕಾ ಭವಂತಃ ಚ್ಯವಂತೆ ಲೋಕಚ್ಯುತಾ ಭವಂತೀತಿ ॥

ಅವಿದ್ಯಾವುಳ್ಳವರೂ ಸಹ ಅನೇಕ ಪ್ರಕಾರವೆಂದು ತಿಳಿಸುತ್ತಾರೆ. ಅಜ್ಞಾನವುಳ್ಳವರಾಗಿ, ಭಗವದ್ವಿಷಯಕಜ್ಞಾನರಹಿತರಾಗಿ, ನಾಶಹೊಂದುವ ಸ್ವರ್ಗಾದಿ ಫಲಗಳಲ್ಲಿ ರಾಗವುಳ್ಳವರಾಗಿ, ಅನೇಕ ಕರ್ಮಗಳನ್ನು ಮಾಡುತ್ತಿರುವುದರಿಂದ ಶ್ರೀಹರಿ ಜ್ಞಾನರಹಿತರಾಗಿರುತ್ತಾರೆ. ಶ್ರೀಹರಿಯು ರಾಜನಂತೆ ಸ್ವಲ್ಪ ಉತ್ತಮನಾಗಿದ್ದಾನೆಂದು, ಸರ್ವರಿಗೂ ಸಮನೆಂದು, ಹೀನನೆಂದು ತಿಳಿಯುತ್ತಾರೆ. ಅದರಿಂದ ವ್ಯಗ್ರಚಿತ್ತರಾಗಿ, ಕ್ಷಣಿಕವಾದ ಲೋಕಗಳನ್ನು ಹೊಂದುವವರಾಗಿ, ಲೋಕದಲ್ಲಿ ಚ್ಯುತರಾಗುತ್ತಾರೆ.

**ಮಂ ॥ ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ । ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥ 10 ॥**

ಖಂಡಾರ್ಥ : ಏತದೇವ ಫಲಮುಕ್ತಾನುವಾದಪೂರ್ವಂ ವ್ಯನಕ್ತಿ – ಇಷ್ಟಾಪೂರ್ತಮಿತಿ । ಇಷ್ಟಂ ಚ ಪೂರ್ತಂ ಚ ಇಷ್ಟಾಪೂರ್ತಂ, ದ್ವಂದ್ವೈಕವದ್ಭಾವಃ, 'ಅನ್ಯೇಭ್ಯೋಽಪಿ ದೃಶ್ಯತೆ' ಇತಿ ಧೀರ್ಘಃ । ಇಷ್ಟಂ ಯಜನಂ ಪೂರ್ತಮನ್ನದಾನಾದಿ । ವರಿಷ್ಠಂ ಪರಮಶ್ರೇಯಸ್ಸಾಧನಂ ಮನ್ಯಮಾನಾಃ ಅನ್ಯದ್ಭಗವಲ್ಲಕ್ಷಣಂ ಶ್ರೇಯಃ ಪ್ರಶಸ್ತಂ ವಸ್ತು ನ ವೇದಯಂತೇ ನ ಸಮ್ಯಕ್ ಜಾನಂತೀತ್ಯರ್ಥಃ । ತೇ ಭಗವತಃ ಕಿಂಚಿದುತ್ತಮತ್ವಜ್ಞಾನಪೂರ್ವಕಂ ಕರ್ಮಾನುಷ್ಠಾತಾರಃ ಸುಕೃತೇ ಸುಕೃತಸಾಧ್ಯೇ ನಾಕಸ್ಯ ಸ್ವರ್ಗಸ್ಯ ಪೃಷ್ಠೇ ವಿಸ್ತೀರ್ಣಸ್ಥಲವಿಶೇಷೇಽನುಭೂತ್ವಾ ಕಾಮಾನನುಭೂಯ ಇಮಂ ಲೋಕಂ ಭೂಲೋಕಂ ಮಾನುಷಭಾವಮಿತಿ ಯಾವತ್ ವಿಶಂತಿ ಪ್ರಾಪ್ನುವಂತಿ । ತೇ ಹರೇಃ ಸಮತ್ವಹೀನತ್ವಪೂರ್ವಂ ಕರ್ಮಕೃತಸ್ತು ಹೀನತರಂ ಲೋಕಮಂಧಂತಮೋ ವಿಶಂತಿ । ವಾ ಶಬ್ದೋ ವ್ಯವಸ್ಥಿತವಿಕಲ್ಪಾರ್ಥಃ । ತದುಕ್ತಂ –

ದೇವೇಭ್ಯ ಉತ್ತಮಂ ವಿಷ್ಣುಂ ರಾಜವದ್ಯಸ್ತು ಮನ್ಯತೇ ।
ಯಾಜೀ ಸ ಮಾನುಷಂ ಯಾತಿ ಸಾಮ್ಯಹೀನತ್ವವಿತ್ತಮಃ ॥ ಇತಿ

ತಥಾ ಚೋಕ್ತಮ್ ಗೀತಾತಾತ್ಪರ್ಯೇ–

ಯೇನ ಜಾನಂತಿ ತಂ ವಿಷ್ಣುಂ ಯಥಾತಥ್ಯೇನ ಸಂಶಯಾತ್ ।
ಜಿಜ್ಞಾಸವಶ್ಚ ನಿತರಾಂ ಶ್ರದ್ಧಾವಂತಃ ಸುಸಾಧವಃ ॥

ನಿರ್ಣೀತೃಣಾಮಭಾವೇನ ಕೇವಲಂ ಜ್ಞಾನವರ್ಜಿತಾಃ ।
ತೇ ಯಜ್ಞಿಕಾಃ ಸ್ವರ್ಗಭೋಗಕ್ಷಯೇ ಯಾಂತಿ ಮನುಷ್ಯತಾಮ್ ॥ ಇತಿ ॥

ತಥಾ–
ಯೇತು ಭಾಗವತಾಚಾರ್ಯೈಸ್ಸಮ್ಯಗ್‌ಯಜ್ಞಾದಿ ಕುರ್ವತೇ ।
ಬಹಿರ್ಮುಖಾ ಭಗವತೋಽನಿವೃತಾಶ್ಚ ವಿಕರ್ಮಣಃ ।
ದಕ್ಷಿಣಾತರ್ಪಿತಾನಾಂ ತೇ ಆಚಾರ್ಯಾಣಾಂ ತು ತೇಜಸಾ ।
ಯಾಂತಿ ಸ್ವರ್ಗಂ ತತಃ ಕ್ಷಿಪ್ರಂ ತಮೋಽಧಂ ಪ್ರಾಪ್ನುವಂತಿ ಚ ॥ ಇತಿ ॥

ಯಜ್ಞ, ಅನ್ನದಾನಗಳೇ ಶ್ರೇಯಸ್ಸಾಧನವೆಂದು ತಿಳಿದು, ಬೇರೊಂದು ಉತ್ತಮನಾದ ಶ್ರೀಹರಿಯನ್ನು ಶ್ರೇಷ್ಠವಸ್ತುವೆಂದು ತಿಳಿಯುವುದಿಲ್ಲ. ಶ್ರೀಹರಿಯು ಸ್ವಲ್ಪ ಉತ್ತಮನೆಂದು ತಿಳಿದು ಯಜ್ಞಾದಿಗಳಲ್ಲಿ ಆಸಕ್ತರಾದವರು ಪುಣ್ಯಸಾಧ್ಯವಾದ, ಸ್ವರ್ಗಲೋಕದ ಪೃಷ್ಠ ಭಾಗದಲ್ಲಿದು ಸ್ವಲ್ಪ ಭೋಗಗಳನ್ನು ಅನುಭವಿಸಿ, ಈ ಲೋಕದಲ್ಲಿ ಮನುಷ್ಯಭಾವವನ್ನು ಹೊಂದುತ್ತಾರೆ. ಯಾರು ಶ್ರೀಹರಿಯು ಎಲ್ಲರ ಸಮನೆಂದು, ಹೀನನೆಂದು ತಿಳಿದು ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೆಯೋ, ಅವರುಗಳು ಹೀನತರವಾದ ಲೋಕಗಳನ್ನು ಹೊಂದುತ್ತಾರೆ. ಇಲ್ಲಿರುವ 'ವಾ' ಶಬ್ದವು ವ್ಯವಸ್ಥಿತವಿಕಲ್ಪದಲ್ಲಿರುತ್ತದೆ. ಈ ವಿಷಯಗಳನ್ನು ಶ್ರೀ ಮಧ್ವಾಚಾರ್ಯರು ಗೀತಾತಾತ್ಪರ್ಯದಲ್ಲಿ ನಿರೂಪಿಸಿರುತ್ತಾರೆ.

**ಮಂ ॥ ತಪಃ ಶ್ರದ್ಧೇ ಯೇಽಭ್ಯುಪವಸಂತ್ಯರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಃ । ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯಾತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥ 11 ॥**

ಖಂಡಾರ್ಥ : ಏವಂ ಸತ್ಯಜ್ಞಾನಕಾಮನಯಾ ಕರ್ಮಾಣ್ಯಾಚರಥೇತ್ಯುಕ್ತ್ವಾ ಕುತ್ರ ಕಥಮಿತ್ಯಾಶಂಕಾಯಾಂ ಯದೇತ್ಯಾದಿ ಮಂತ್ರಪಂಚಕೇನ ಕರ್ಮಾನುಷ್ಠಾನಸ್ಥಲ–ಮಿತಿಕರ್ತವ್ಯತಾಂ ಫಲಂ ಚೋಕ್ತ್ವಾ, ಪ್ಲವಾ ಇತ್ಯಾದಿನಾ ಮಂತ್ರಚತುಷ್ಟಯೇ–ನೋಕ್ತವೈಪರೀತ್ಯೇನ ಕರ್ಮಾನುಷ್ಠಾನೇಽನರ್ಥಂ ಚೋಕ್ತ್ವಾಽಧುನಾ 'ತಾನ್ಯಾಚರಥ ಸತ್ಯಕಾಮಾಃ' ಇತ್ಯತ್ರ ಕರ್ಮದೇವತಾಜ್ಞಾನಂ ತದನುಷ್ಠಾನೇನಾಂತಃಕರಣಶುದ್ಧಿದ್ವಾರಾ ಜ್ಞಾನಹೇತುಶ್ರವಣಾದ್ಯಂಗಂ ಸದ್‌ಬ್ರಹ್ಮಜ್ಞಾನಮುತ್ಪಾದ್ಯ ಪರಮಪುಮರ್ಥಾಯ ಭವತೀತಿ

ಯದುಕ್ತಂ ತತ್ರ ಸರ್ವಥಾಽವಧಾನೇನ ಭಾವ್ಯಮಿತಿ ಭಾವೇನ ಕರ್ಮಾಚಾರಾದೇರುಕ್ತರೀತ್ಯಾ ಬ್ರಹ್ಮಜ್ಞಾನಾರ್ಥತ್ವಂ ಫಲೋಕ್ತ್ಯೋಪಸಂಹರತಿ – ತಪಃ ಶ್ರದ್ಧೆ ಇತಿ – ಯೇ ಭಗವಜ್ಜ್ಞಾನಕಾಮಾಃ ಅರಣ್ಯೇ ಪುಣ್ಯದೇಶೇ ಸ್ಥಿತ್ವಾ ತಪಃ ಕೃಚ್ಛ್ರಚಾಂದ್ರಾಯಣಾದಿರೂಪಂ, ಶ್ರವಣಮನನಾಲೋಚನರೂಪಂ ವಾ, ಶ್ರದ್ಧಾಸ್ತಿಕ್ಯಾದಿಬುದ್ಧಿಪೂರ್ವಕಂ ಯಾಗಾದಿಕಮಭ್ಯುಪವಸಂತಿ, ಆಚರಂತೇ ಇತಿ ಶೇಷಃ । ಶಾಂತಾಃ ಭಗವನಿಷ್ಠಾವಂತಃ ತೇ ತಪ ಆದಿನಾ ಪೂರ್ವೋಕ್ತಪ್ರಣಾಢ್ಯಾ ವಿದ್ವಾಂಸಃ ಭಗವಜ್ಜ್ಞಾನಿನೋ ಭೂತ್ವಾ ಯಾವತ್ಪ್ರಾರಬ್ಧಂ ದೇಹರಕ್ಷಣಾರ್ಥಂ ಭೈಕ್ಷಚರ್ಯಾಂ ಭೈಕ್ಷಂ ಕರ್ಮ ಚರಂತಃ ಕುರ್ವಂತಃ ಸೂರ್ಯದ್ವಾರೇಣ ಸೂರ್ಯಮಂಡಲಂ ಪ್ರಾಪ್ಯ ತದ್ವಾರೇಣ ವಿರಜಾಃ ವಿಗತ ಪ್ರಾರಬ್ಧಕರ್ಮಾಣಃ "ತೇಜಸಿ ಸೂರ್ಯೇ ಸಂಪನ್ನಃ ಪಾಪ್ಮನಾ ವಿನಿರ್ಮುಕ್ತಃ" ಇತಿ ಶ್ರುತ್ಯಂತರೋಕ್ತೇಃ, 'ಆದೇಹಂ ಕರ್ಮಮಾಚರೇತ್' ಇತಿ ಸ್ಮೃತೇಶ್ಚ, ಪ್ರಯಾಂತಿ ಪ್ರಕರ್ಷೇಣ ಯಾಂತಿ ಕುತ್ರೇತ್ಯತ ಆಹ– ಯತ್ರಾಮೃತ ಇತಿ ॥ ಅಮೃತಃ ದೇಹತೋಽಪ್ಯವಿನಾಶೀ ಪುರುಷಃ ಪೂರ್ಣಷಡ್ಗುಣಃ ಸಃ ಪ್ರಸಿದ್ಧೋಽವ್ಯಯಾತ್ಮಾ ಶಶ್ವದೇಕಪ್ರಕಾರಃ ಸ್ವಾಮೀ ಯತ್ರ ವರ್ತತೇ ತತ್ರ ಪ್ರಯಾಂತೀತ್ಯರ್ಥಃ ॥

ಈ ರೀತಿಯಲ್ಲಿ ಭಗವಂತನಜ್ಞಾನ ಪ್ರಾಪ್ತಿಗೋಸ್ಕರವಾಗಿಯೇ ಕರ್ಮಗಳನ್ನು ಅನುಷ್ಠಾನ ಮಾಡಿರೆಂದು ಹೇಳಿ, ಎಲ್ಲಿ ಹಾಗೂ ಹೇಗೆ ಎಂಬ ಶಂಕೆ ಬಂದಾಗ ಯದಾ ಎಂದು ಐದು ಮಂತ್ರಗಳಿಂದ ಕರ್ಮಾನುಷ್ಠಾನ ಸ್ಥಳ, ಅದಕ್ಕೆ ಅವಶ್ಯಕವಾದ ವಿಷಯಗಳು, ಫಲಗಳನ್ನು ನಿರೂಪಿಸಿ, 'ಪ್ಲವಾ' ಎಂಬ ನಾಲ್ಕು ಮಂತ್ರಗಳಿಂದ ವಿಪರೀತವಾಗಿ ಕರ್ಮಾನುಷ್ಠಾನ ಮಾಡಿದರೆ ಆಗುವ ಅನರ್ಥ ಫಲವನ್ನು ತಿಳಿಸಿ, ಈಗ 'ತಾನಿ ಆಚರತ' ಎಂಬಲ್ಲಿ ಕರ್ಮದೇವತಾಜ್ಞಾನಪೂರ್ವಕವಾಗಿ ಆ ಕರ್ಮಗಳ ಅನುಷ್ಠಾನದಿಂದ ಅಂತಃಕರಣದ ಶುದ್ಧಿಯ ದ್ವಾರ ಜ್ಞಾನಕಾರಣೀಭೂತವಾದ ಶ್ರವಣಾದಿಗಳಿಂದ ಬ್ರಹ್ಮಜ್ಞಾನವು ಹುಟ್ಟಿ, ಪರಮಪುರುಷಾರ್ಥವು ಬರುತ್ತದೆಂದು ಹೇಳಿದಾಗ ಈ ಕರ್ಮಗಳನ್ನು ಅನುಷ್ಠಾನ ಮಾಡುವ ಕಾಲದಲ್ಲಿ ಸದಾ ಶ್ರೀಹರಿಯಲ್ಲಿ ಮನಸ್ಸುಳ್ಳವನಾಗಬೇಕು, ಆಗ ಈ ಕರ್ಮಗಳಿಗೆ ಬ್ರಹ್ಮಜ್ಞಾನಕಾರಣತ್ವವು ಬರುತ್ತದೆಂದು ಫಲವನ್ನು ಹೇಳುತ್ತಾ ಉಪಸಂಹರಿಸುತ್ತಾರೆ.

ಯಾರು ಭಗವಂತನ ಜ್ಞಾನಾಪೇಕ್ಷಿಗಳಾಗಿ, ಪುಣ್ಯಸ್ಥಳಗಳಲ್ಲಿದ್ದು ಕೃಚ್ಛ್ರಚಾಂದ್ರಾಯಣಾದಿರೂಪವಾದ ಅಥವಾ ಶ್ರವಣಮನನರೂಪವಾದ ತಪಸ್ಸನ್ನು ಅಸ್ತಿಕ್ಯ ಬುದ್ದಿಯಿಂದ ಭಗವನ್ನಿಷ್ಠರಾಗಿ ಅನುಷ್ಠಾನ ಮಾಡುತ್ತಾರೆಯೋ, ಅವರುಗಳು,

ಭಗವದ್‌ಜ್ಞಾನಿಗಳಾಗಿ ಪ್ರಾರಬ್ಧಕರ್ಮಗಳು ಮುಗಿಯುವ ಪರ್ಯಂತರವಾಗಿ ಭಿಕ್ಷಾವೃತ್ತಿಯನ್ನು ಮಾಡುತ್ತಾ ಸೂರ್ಯನ ದ್ವಾರಾ ಸೂರ್ಯಮಂಡಲವನ್ನು ಹೊಂದಿ, ತದ್ವಾರಾ ಪ್ರಾರಬ್ಧಗಳನ್ನು ಕಳೆದುಕೊಂಡು, 'ತೇಜೋಮಯನಾದ ಸೂರ್ಯನನ್ನು ಹೊಂದಿ ಮುಕ್ತರಾಗುತ್ತಾರೆ' ಎಂಬ ಶೃತಿವಚನದಂತೆ, ದೇಹವಿರುವ ಪರ್ಯಂತರವಾಗಿ ಕರ್ಮಗಳನ್ನು ಅನುಷ್ಠಾನ ಮಾಡಬೇಕು ಎಂಬ ಸ್ಮೃತಿಯಂತೆ, ಉತ್ತಮವಾದ ಗತಿಯನ್ನು ಹೊಂದುತ್ತಾರೆ. ಎಲ್ಲ ದೇಹದಿಂದಲೂ ನಾಶರಹಿತನಾದ, ಪೂರ್ಣಷಡ್ಗುಣಗಳುಳ್ಳ, ಶಶ್ವದೇಕಪ್ರಕಾರನಾದ, ಸ್ವಾಮಿಯಾದ ಶ್ರೀಹರಿಯು ಎಲ್ಲಿ ಇರುತ್ತಾನೆಯೋ ಆ ಲೋಕವನ್ನು ಹೊಂದುತ್ತಾರೆ.

**ಮಂ ॥ ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥ 12 ॥**

ಖಂಡಾರ್ಥ : ಏವಂ ಕರ್ಮಾದಿಜ್ಞಾನಂ 'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' ಇತಿ ಸೂತ್ರೋಕ್ತದಿಶಾ ಪ್ರಾಗುಕ್ತಪ್ರಶಾಢ್ಯಾ ಬ್ರಹ್ಮಜ್ಞಾನಾರ್ಥಂ ಸತ್ವರಮಪುಮರ್ಥಹೇತುಃ । ಕರ್ಮಾದಿಬೋಧಕಋುಗಾದಿವಿದ್ಯಾ ಚ ತಥಾ ಪರವಿದ್ಯಾ ಭವತೀತ್ಯುಕ್ತಮ್ । ಇದಾನೀಂ ತು "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" ಇತಿ ಸೂತ್ರೋಕ್ತದಿಶಾ ಕಾಮ್ಯಕರ್ಮತತ್ಫಲಾದೌ ವೈರಾಗ್ಯಜನನದ್ವಾರಾ ಬ್ರಹ್ಮಜ್ಞಾನಸಂಪಾದನೇಚ್ಛಾಜನನೇನ ಬ್ರಹ್ಮಜ್ಞಾನಾರ್ಥಂ ಭವತ್ ಪರಮಪುರುಷಾರ್ಥಹೇತುರ್ಭವತೀತಿ ತದ್ಬೋದಕಋುಗಾದಿವಿದ್ಯಾಽಪ್ಯಲ್ಪಾಸ್ಥಿರ ಫಲಾದಿಬೋಧನೇನ ತತ್ರಾಧಿಕಾರಿಣೋ ವೈರಾಗ್ಯಜನನದ್ವಾರಾ ಬ್ರಹ್ಮಜ್ಞಾನ ಸಂಪಾದನೇಚ್ಛಾಜನನೇನ ಬ್ರಹ್ಮಜ್ಞಾನಾರ್ಥಂ ಭವತ್ ಪರಮಪುರುಷಾರ್ಥಹೇತುರ್ಭವತೀತಿ ತದ್ಬೋದಕ ಋುಗಾದಿವಿದ್ಯಾಽಲ್ಪಾಸ್ಥಿರಫಲಾದಿಬೋಧನೇನ ತತ್ರಧಿಕಾರಿಣೋ ವೈರಾಗ್ಯ ಜನನದ್ವಾರಾ ನಿತ್ಯಾನಲ್ಪಫಲಕಬ್ರಹ್ಮಜ್ಞಾನಕಾಮೋತ್ಪಾದನೇನ ಬ್ರಹ್ಮಜ್ಞಾನೋಪ-ಯೋಗಿನೀತಿ ಪರವಿದ್ಯಾಚ ಭವತೀತಿ ಭಾವೇನಾಽಽಹ – ಪರೀಕ್ಷ್ಯೇತಿ ॥ ಲೋಕಾನ್ ವಿಷ್ಣುಲೋಕೇತರಾನ್ ಕರ್ಮಚಿತಾನ್ ಕಾಮ್ಯಕರ್ಮಾಪಾದಿತಾನ್ ಪರೀಕ್ಷ್ಯಾಸಾರಾನಿತ್ಯತಯಾ ವಿಚಾರ್ಯ ಬ್ರಾಹ್ಮಣೋ ಬ್ರಾಹ್ಮಣನರೂಪಬ್ರಹ್ಮಜ್ಞಾನಯೋಗ್ಯಃ ನಿರ್ವೇದಂ ಕಾಮ್ಯಕರ್ಮಣಿ ತತ್ಫಲೇ ಚ ವೈರಾಗ್ಯಮಾಯಾತ್ ಪ್ರಾಪ್ನುಯಾತ್ ।

ಯತೋಽಕೃತೋ ಮೋಕ್ಷಃ ಕೃತೇನ ಕರ್ಮಣಾ ನಾಸ್ತಿ ತತ್ತಸ್ಮಾತ್ತಚ ಮೋಕ್ಷಾದಿತರತ್ರ ನಿರ್ವಿಣ್ಣೋ ವಿಜ್ಞಾನಾರ್ಥಂ ಮೋಕ್ಷಫಲಕಬ್ರಹ್ಮಜ್ಞಾನಾರ್ಥಂ ಗುರುಮೇವಾಭಿಗಚ್ಛೇತ್ । ಗುರುಮುಪಗಂತಾರಂ ಚ ವಿಶಿನಷ್ಟಿ – ಸಮಿತ್ಪಾಣಿರಿತಿ ॥ ಶ್ರೋತ್ರಿಯಂ ಛಂದೋಽಧ್ಯೇತಾರಂ ಬ್ರಹ್ಮನಿಷ್ಠಂ ಭಗವದ್ಭಕ್ತಂ ಗುರುಮಿತ್ಯನ್ವಯಃ ॥

"ಉತ್ಕ್ರಮಿಷ್ಯತಃ ಏವಂ ಭಾವಾದಿತ್ಯೌಡುಲೋಮಿಃ" ಎಂಬ ಸೂತ್ರದಲ್ಲಿ ನಿರೂಪಿಸಿದಂತೆ, ಹಿಂದೆ ಹೇಳಿದ ರೀತಿಯಲ್ಲಿ ಬ್ರಹ್ಮಜ್ಞಾನಕ್ಕೆ ಸಾಧನವಾದುದ್ದೇ ಪುರುಷಾರ್ಥಕ್ಕೆ ಕಾರಣವಾದವುಗಳು. ಆದ್ದರಿಂದ ಕರ್ಮಾದಿಗಳನ್ನು ಬೋಧಿಸುವಂತಹ ಋಗಾದಿವಿದ್ಯೆಗಳೂ ಸಹ ಪರವಿದ್ಯೆಯಾಗುತ್ತವೆ ಎಂದು ನಿರೂಪಿಸಲ್ಪಟ್ಟಿತು. ಈಗ "ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ" ಎಂಬ ಸೂತ್ರದಲ್ಲಿ ಸೂಚಿಸಿದಂತೆ ಕಾರ್ಯಕರ್ಮಗಳು, ಅದರ ಫಲಾದಿಗಳಲ್ಲಿ ವೈರಾಗ್ಯವನ್ನು ಹುಟ್ಟಿಸಿ ಬ್ರಹ್ಮಜ್ಞಾನ ಸಂಪಾದಿಸಬೇಕೆಂಬ ಇಚ್ಛೆಯನ್ನು ಹುಟ್ಟಿಸಿ, ಬ್ರಹ್ಮಜ್ಞಾನಕ್ಕೆ ಸಾಧನವಾದುದ್ದೇ ಪುರುಷಾರ್ಥವಾಗುತ್ತದೆಂದು ಅದನ್ನು ಬೋಧಿಸುವ ಋಗಾದಿವಿದ್ಯೆಗಳು. ಅಲ್ಪಾಸ್ಥಿರ ಫಲವನ್ನು ಬೋಧಿಸಿ ಅಧಿಕಾರಿಗಳಿಗೆ ವೈರಾಗ್ಯವನ್ನು ಹುಟ್ಟಿಸಿ ನಿತ್ಯಸ್ಥಿರವಾದ ಬ್ರಹ್ಮಜ್ಞಾನದ ಇಚ್ಛೆಯನ್ನು ಹುಟ್ಟಿಸಿ ಬ್ರಹ್ಮಜ್ಞಾನಕ್ಕೆ ಉಪಯೋಗವಾಗುತ್ತದೆ ಪರವಿದ್ಯೆಯೆಂದು ರೂಪಿಸುತ್ತಾರೆ.

ಕಾಮ್ಯಕರ್ಮಗಳಿಂದ ಸಂಪಾದಿತವಾದ ವಿಷ್ಣುವಿನಿಂದ ಭಿನ್ನವಾದ ಲೋಕಗಳನ್ನು ಅಸಾರ ಅನಿತ್ಯವೆಂದು ವಿಚಾರಮಾಡಿ, ಬ್ರಹ್ಮಜ್ಞಾನಕ್ಕೆ ಯೋಗ್ಯನಾದ ಬ್ರಾಹ್ಮಣನು ಕಾಮ್ಯಕರ್ಮ ಹಾಗೂ ಅದರ ಫಲಗಳಲ್ಲಿ ವೈರಾಗ್ಯವನ್ನು ಹೊಂದಬೇಕು. ಮೋಕ್ಷವು ಕರ್ಮದಿಂದ ಹೊಂದಲು ಸಾಧ್ಯವಾಗುವುದಿಲ್ಲವಾದ್ದರಿಂದ ಮೋಕ್ಷೇತರಫಲಗಳಲ್ಲಿ ವಿರಕ್ತನಾಗಿ ಮೋಕ್ಷಫಲಕವಾದ ಬ್ರಹ್ಮಜ್ಞಾನಕ್ಕೆ, ಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿದ ಹಾಗೂ ಭಗವದ್ಭಕ್ತರಾದ ಗುರುಗಳನ್ನೇ ಸೇವಿಸಬೇಕು.

**ಮಂ ॥ ತಸ್ಮೈ ಸ ವಿದ್ವಾನ್ ಉಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ । ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಮ್ ॥ 13 ॥**

ಖಂಡಾರ್ಥ : ಗುರೂಪಸತ್ತಿಂ ಕುರ್ಯಾದಿತ್ಯುಕ್ತ್ವಾಽಂಗಿರಾಃ ಕಿಮಕರೋತ್ ಇತ್ಯತಃ ಶೌನಕಾಯ ತತ್ವಮುಪದಿದೇಶೇತ್ಯಾಹ ವೇದಪುರುಷಃ – ತಸ್ಮಾ ಇತ್ಯಾದಿನಾ ॥ ಉಪಸನ್ನಾಯೋಪಸತ್ತಿಂ ಪ್ರಾಪ್ತಾಯ ಸಂಯಕ್ ಪ್ರಶಾಂತಚಿತ್ತಾಯ ವಿಷಯೇಷ್ವಲಂಬುದ್ಧಿಮತೇ, ವಿರಕ್ತಾಯೇತಿ ಯಾವತ್ । ಶಮಾನ್ವಿತಾಯ ಭಗವನಿಷ್ಠಾಯುಕ್ತಾಯ ತಸ್ಮೈ ಶೌನಕಾಯ ಸಃ ವಿದ್ವಾನಂಗಿರಾಃ ಯೇನ ಯಯಾ ವಿದ್ಯಯಾ, ವ್ಯತ್ಯಯಾತ್ ಯೇನ ಋಗಾದಿಶಾಸ್ತ್ರೇಣೇತಿ ವಾ ಸತ್ಯಮನನ್ಯಾಧೀನಸ್ವರೂಪಂ ಪುರುಷಮಕ್ಷರಂ ವೇದ ಜಾನಾತಿ ತಾಮೃಗಾದಿಶಾಸ್ತ್ರರೂಪಾಂ ಬ್ರಹ್ಮವಿದ್ಯಾಂ ತತ್ವತೋ ಯಥಾತಥ್ಯೇನ ಪ್ರೋವಾಚೇತಿ । ಕರ್ಮದೇವತಾದಿ ಭೋಧಕತಯಾ ಶೌನಕೇನಾವಗತಾಂ ಋಗಾದಿವಿದ್ಯಾಂ ಪರಮಮುಖ್ಯವೃತ್ತಿಮಹಾತಾತ್ಪರ್ಯಾಭ್ಯಾಂ ಬ್ರಹ್ಮಜ್ಞಪ್ತಿ ಹೇತುತ್ವೇನ ಪರವಿದ್ಯಾ ಯಥಾ ಭವತೀ ತಥಾ ವ್ಯಾಚಖ್ಯೌ ಇತಿ ಭಾವಃ । ಅತ ಏವ ತತ್ವತಃ ಇತ್ಯುಕ್ತಿಃ ॥

ಗುರುಗಳ ಉಪಸತ್ತಿಯನ್ನು ಮಾಡಬೇಕು ಎಂದು ಹೇಳಿದ ಮೇಲೆ ಆಂಗೀರರು ಏನು ಮಾಡಿದರು ಎಂಬ ಶಂಕೆಗೆ ಶೌನಕರಿಗೆ ತತ್ವವನ್ನು ಉಪದೇಶಿಸಿದರು ಎಂದು ವೇದ ಪುರುಷರು ಹೇಳುತ್ತಾರೆ. ಗುರುಗಳ ಉಪಸತ್ತಿಯನ್ನು ಹೊಂದಿದಂತಹ, ವಿಷಯಗಳಲ್ಲಿ ಅಲಂಬುದ್ಧಿಯುಳ್ಳಂತಹ, ವಿರಕ್ತರಾದ, ಭಗವಂತನಲ್ಲಿ ನಿಷ್ಠೆಯುಳ್ಳಂತಹ ಶೌನಕರಿಗೆ, ಜ್ಞಾನಿಗಳಾದ ಅಂಗಿರರು ಯಾವ ವಿದ್ಯೆಯಿಂದ ಋಗಾದಿಶಾಸ್ತ್ರಗಳಿಂದ, ಸ್ವತಂತ್ರನಾದ, ನಾಶರಹಿತನಾದ, ಶ್ರೀಹರಿಯನ್ನು ತಿಳಿಯುತ್ತಾನೆಯೋ ಅಂತಹ ಋಗಾದಿಶಾಸ್ತ್ರಗಳಾದ ಬ್ರಹ್ಮವಿದ್ಯೆಯನ್ನು ಯಥಾರ್ಥವಾಗಿ ನಿರೂಪಿಸಿದರು. ಶೌನಕರಿಂದ ತಿಳಿಯಲ್ಪಟ್ಟ ಋಗಾದಿ ವೇದಗಳನ್ನು, ಪರಮಮುಖ್ಯವೃತ್ತಿಮಹಾತಾತ್ಪರ್ಯಗಳಿಂದ ಬ್ರಹ್ಮಜ್ಞಾನಕ್ಕೆ ಕಾರಣವಾಗಿ ಪರವಿದ್ಯೆಯಾಗುವ ರೀತಿಯಲ್ಲಿ ವ್ಯಾಖ್ಯಾನ ಮಾಡಿದರು. ಆದ್ದರಿಂದ 'ತತ್ವತಃ' ಎಂಬ ಶಬ್ದವು ಹೇಳಲ್ಪಟ್ಟಿದೆ.

**ಇತಿ ದ್ವಿತೀಯಃ ಖಂಡಃ**

# ಅಥ ತೃತೀಯಃ ಖಂಡಃ

**ಮಂ ॥ ತದೇತತ್ಸತ್ಯಂ । ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ । ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ ॥ 1 ॥**

**ಖಂಡಾರ್ಥ : ಋಗಾದಿಶಾಸ್ತ್ರಸ್ಯ ಪರವಿದ್ಯಾತ್ವಾಪಾದಕೋ ಮುಖ್ಯೋಽರ್ಥಃ ಕಃ? ಯದರ್ಥತಯಾ ಋಗಾದಿಶಾಸ್ತ್ರಂ ಬ್ರಹ್ಮವಿದ್ಯಾತ್ವೇನ ಪ್ರೋವಾಚೇತ್ಯತಃ ಋಗಾದಿಶಾಸ್ತ್ರಮುಖ್ಯಾರ್ಥೋ ವಿಶ್ವಸ್ರಷ್ಟತ್ವಾದಿಗುಣವಿಶಿಷ್ಟೋ ಹರಿರಿತಿ ಭಾವೇನಾಹ – ತದೇತದಿತಿ ॥ ವಕ್ಷ್ಯಮಾಣಂ ಪ್ರಮೇಯಂ ಸತ್ಯಂ ನ ಮಿಥ್ಯೇತ್ಯರ್ಥಃ । ವಿಸ್ಫುಲಿಂಗಾಃ ಅಗ್ನಿಕಣಾಃ ಪ್ರಭವಂತೇ ಪ್ರಭವಂತಿ । ಸರೂಪಾಃ ಪ್ರಕಾಶೇನ ಸದೃಶಾಃ ವಿವಿಧಾಃ ದೇವದಾನವಮಾನವಾದಿಭೇದೇನ ನಾನಾವಿಧಾಃ ಭಾವಾಃ ಪದಾರ್ಥಾಃ ಸೋಮ್ಯ ಸೋಮಪಾನಾರ್ಹೇತಿ ಶೌನಕಸ್ಯ ಸಂಬೋಧನಮ್ । ತತ್ರೈವ ಚಾಕ್ಷರೇ ಅಪಿಯಂತಿ ಪ್ರಲಯೇ ತದುದರೇ ಲೀಯಂತೇ । 'ಅಕ್ಷರಾತ್ಸಂಭವತೀಹ ವಿಶ್ವಮ್' ಇತಿ ಪ್ರಾಗುಕ್ತಸ್ಯ ಪ್ರಪಂಚನಾತ್ ಅಪೌನರುಕ್ತ್ಯಮ್ ॥**

ಋಗಾದಿ ಶಾಸ್ತ್ರಗಳಿಗೆ ಪರವಿದ್ಯಾತ್ವವನ್ನು ತಂದು ಕೊಡುವ ಮುಖ್ಯಾರ್ಥವು ಯಾವುದು? ಯಾವಕಾರಣಗಳಿಂದ ಋಗಾದಿಗಳು ಪರವಿದ್ಯಾರೂಪವಾಗಿ ನಿರೂಪಲ್ಪಟ್ಟಿತು? ಅಂತಹ ಋಗಾದಿಶಾಸ್ತ್ರಗಳಿಗೆ ಮುಖ್ಯಾರ್ಥವಾದ ವಿಶ್ವಸೃಷ್ಟತ್ವಾದಿ ಗುಣಗಳುಳ್ಳ ಶ್ರೀ ಹರಿ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

ನಾವು ಮುಂದೆ ನಿರೂಪಿಸುವ ತತ್ವಗಳು ನಿತ್ಯವು. ಮಿಥ್ಯೆಯಲ್ಲ. ಯಾವ ರೀತಿಯಲ್ಲಿ ಜ್ವಲಿಸುವ ಅಗ್ನಿಯ ಕುಂಡದಿಂದ, ಅಗ್ನಿಯ ಕಣಗಳು ಸಮಾನ ರೂಪವಾದವುಗಳು, ನಾನಾ ಪ್ರಕಾರವಾದವುಗಳು ಆಗಿ ಹೇಗೆ ಹೊರಗೆ ಬರುತ್ತವೆಯೋ, ಅದೇ ರೀತಿಯಲ್ಲಿ ಅಕ್ಷರನಾಮನಾದ ಶ್ರೀ ಹರಿಯಿಂದ ದೇವ, ದಾನವ, ಮನುಷ್ಯನೆಂಬ ನಾನಾ ಪ್ರಭೇದಗಳುಳ್ಳ, ನಾನಾ ಪ್ರಕಾರವಾದ ಪದಾರ್ಥಗಳು ಹುಟ್ಟುತ್ತವೆ. ಅದೇ ರೀತಿಯಲ್ಲಿ ಅಲ್ಲೇ ಶ್ರೀಹರಿಯಲ್ಲೇ ಪ್ರಲಯಕಾಲದಲ್ಲಿ ಪ್ರವೇಶಿಸುತ್ತವೆ. 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂದು ಹಿಂದೆ ನಿರೂಪಿಸಿದ ವಿವರಣರೂಪವಾದ್ದರಿಂದ ಪೌನರುಕ್ತಿಯೆಂಬ

ದೋಷವಿರುವುದಿಲ್ಲ. ಇಲ್ಲಿ ಶೌನಕರಿಗೆ ಸೋಮಪಾನಕ್ಕೆ ಯೋಗ್ಯವಾದ 'ಸೌಮ್ಯ' ಎಂಬ ಸಂಬೋಧನೆ ಪ್ರಯೊಗವು ಇದೆ.

**ಮಂ ॥ ದಿವ್ಯೋಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥ 2 ॥**

**ಖಂಡಾರ್ಥ : ಅಕ್ಷರಸ್ಯ ಸೃಷ್ಟ್ಯುಪಯುಕ್ತಗುಣಾನ್ ವದನ್ ಜಗತಃ ಇವ ನ ತಸ್ಯ ಜನ್ಮಾದೀತ್ಯಾಹ – ದಿವ್ಯ ಇತಿ । ದಿವ್ಯೋಽತ್ಯದ್ಭುತಃ ಅಮೂರ್ತೋ ನಿಯತಪರಿಚ್ಛಿನಪರಿಮಾಣರಹಿತಃ । ಕಿಂತು ಬಾಹ್ಯೋಽಭ್ಯಂತರಶ್ಚ । "ಅಪ್ರಾಣೋಹ್ಯಮನಾ" ಇತಿ ಷೋಡಶಕಲಾರಹಿತತ್ವಮುಚ್ಯತೇ । ಶುಭ್ರಃ ಶುದ್ಧಃ ಅಕ್ಷರಾತ್ ಜಡಪ್ರಕೃತೇಃ, ಪರತಃ ಶ್ರೀತತ್ವಾತ್ ಪರಃ ಉತ್ತಮಃ ॥**

ಶ್ರೀಹರಿಗೆ ಸೃಷ್ಟಿಗೆ ಕಾರಣವಾದ ಗುಣಗಳನ್ನು ಹೇಳುತ್ತಾ ಜಗತ್ತಿನಂತೆ ಶ್ರೀಹರಿಗೆ ಜನನವಿಲ್ಲವೆಂದು ನಿರೂಪಿಸುತ್ತಾರೆ. ಅತ್ಯದ್ಭುತವಾದ, ನಿಯತವಾದ ಅಲ್ಪ ಪರಿಮಾಣರಹಿತನಾದ, ಒಳಗೂ ಹಾಗೂ ಹೊರಗೂ ವ್ಯಾಪ್ತನಾದ, ಜನನ ರಹಿತನಾದ, ಹದಿನಾರುಕಲೆಗಳಿಂದ ರಹಿತನಾದ ಶುದ್ಧನಾದ, ಜಡಪ್ರಕೃತಿಗಿಂತ ಉತ್ತಮಳಾದ ಚೇತನ ಪ್ರಕೃತಿಗಿಂತ ಉತ್ತಮವಾದವನು ಶೀಹರಿಯು.

**ಮಂ ॥ ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥ 3 ॥**

**ಖಂಡಾರ್ಥ : ಏತಸ್ಮಾತ್ ಪರಾಕ್ಷರಾತ್ ಪ್ರಾಣೋ ಮುಖ್ಯವಾಯುಃ । ವಿಶ್ವಸ್ಯಧಾರಿಣಿ ಪೃಥಿವೀತ್ಯನ್ವಯಃ । ಅತ್ರ ಜಡತದಭಿಮಾನಿನಾಮುಭಯೇಷಾಂ ಗ್ರಹಣಮ್ ॥**

ಅಕ್ಷರನಾಮಕನಾದ ಶ್ರೀಹರಿಯ ದೆಸೆಯಿಂದ ಮುಖ್ಯಪ್ರಾಣದೇವರು, ಮನಸ್ಸು, ಎಲ್ಲಾ ಇಂದ್ರಿಯಗಳು, ಆಕಾಶ, ವಾಯು, ಅಗ್ನಿ ನೀರು, ಈ ಸಮಸ್ತ ಜಗತ್ತಿಗೆ ಧಾರಕವಾದ ಪೃಥ್ವಿಯು ಹುಟ್ಟುತ್ತದೆ. ಇಲ್ಲಿ ಜಡ ಹಾಗೂ ಅಭಿಮಾನಿದೇವತೆಗಳಿಬ್ಬರನ್ನು ಸ್ವೀಕರಿಸಬೇಕು.

ಮಂ ॥ ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥ 4 ॥

ಖಂಡಾರ್ಥ : "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದಿನಾ ಸಾಮಾನ್ಯತಃ ಉಕ್ತಮ್ । ತತ್ಕಿಮ್? ಕಸ್ಮಾದಂಗಾಜ್ಜಾತಮ್ ಇತ್ಯತ ಆಹ – ಅಗ್ನಿರ್ಮೂರ್ಧಾ ಇತಿ ॥ ಅಸ್ಯ ಪ್ರಕೃತಾಕ್ಷರಸ್ಯ ಭಗವತೋ ಮೂರ್ಧಾ ಅಗ್ನಿಃ ಅತ್ತೃತ್ವನಿಮಿತ್ತೇನಾಗ್ನಿನಾಮಾಗ್ನಿಜನಕಶ್ಚ । ಅಗ್ನ್ಯಾಖ್ಯಮೂರ್ಧಜತ್ವಾದಗ್ನೇರಗ್ನಿನಾಮ । ಕಾರ್ಯಕಾರಣಯೋಃ "ಗೋಭಿಃ ಶ್ರೀಣೀತ ಮತ್ಸರಮ್" ಇತ್ಯಾದಾವಿವಾಭೇದೋಪಚಾರೇಣಾಯಂ ನಿರ್ದೇಶಃ । ಏವಮುತ್ತರತ್ರಾಪಿ । ಚಕ್ಷುಷೀ ಚಂದ್ರಸೂರ್ಯೋ ಆಹ್ಲಾದಕತ್ವಾದಿಹೇತುನಾ ಚಂದ್ರಸೂರ್ಯನಾಮಕೇ ಚಂದ್ರಸೂರ್ಯ ಜನಕೇ ಚ । ಶ್ರೋತ್ರೇ ದಿಶಃ । ದಿಶಂತ್ಯಭೀಷ್ಟಮಿತಿ ದಿಜನಾಮಕೇ ದಿಶಾಂ ಜನಕೇ ಚ । ವಾಕ್ ಭಗವತೋ ವಾಕ್ ವಿವೃತವೇದನಾಮಿಕಾ ವಿವೃತಶಬ್ದಿತವಿಸ್ತೀರ್ಣವೇದಜನಿಕಾ, ವಿವೃತಾ ಅಭಿವ್ಯಕ್ತಾ ವಾ । ಭಗವತಃ ಪ್ರಾಣೋ ವಾಯುಃ ವಾಯುನಾಮ ವಾಯುಜನಕಃ । ವಿಶ್ವಮಿತಿ ಕಾಚಿದ್ದೇವತಾ । ಹೃದಯಂ ವಿಶ್ವನಾಮಕಂ ವಿಶ್ವಜನಕಂ ಚ । ಪದ್ಭ್ಯಾಂ ಪೃಥಿವೀತ್ಯಂತೇ ಶ್ರವಣಾತ್ ಪೂರ್ವತ್ರಾಪಿ ಜನ್ಯಜನಕಭಾವೇನ ಅಗ್ನಿರ್ಮೂರ್ಧೇತ್ಯಾದಿ ನಿರ್ದೇಶಃ ಇತಿ ಜ್ಞಾಯತೇ । ಹಿಶಬ್ದಃ ಪದ್ಭ್ಯಾಂ ಭೂಮಿರಿತ್ಯಾದಿಶ್ರುತ್ಯಂತರ ಪ್ರಸಿದ್ಧಿದ್ಯೋತಕಃ । ನ ಕೇವಲಂ ಸೃಷ್ಟಿಸಂಹಾರಕರ್ತಾ ನಿಯಮನಕರ್ತಾಚೇತ್ಯಾಹ – ಏಷ ಸರ್ವಭೂತಾಂತ್ಮರಾತ್ಮಾ ॥ ಅಂತಃಸ್ಥಿತ್ವಾ ಆದಾನಾದಿಕರ್ತೃತ್ವಾದಂತರಾತ್ಮಾ । ತಸ್ಮಾದಗ್ನಿಸ್ಸಮಿಧಶ್ಚ ಪೃಥಿವ್ಯಾಂ ಜಾಯಂತೇ ಇತಿ ಶೇಷಃ । ಯಶ್ಚ ಸೂರ್ಯಃ ತಸ್ಮಾತ್ಸೂರ್ಯಾತ್ ಸೋಮಾಚ್ಚ ಪರ್ಜನ್ಯಃ ವೃಷ್ಟಿಃ ಪರ್ಜನ್ಯಾತ್ ಪೃಥಿವ್ಯಾಮೋಷಧಯಶ್ಚ ಜಾಯಂತೇ ಇತ್ಯರ್ಥಃ ॥

ಹಿಂದಿನ ವಾಕ್ಯದಿಂದ ಸಾಮಾನ್ಯವಾಗಿ ಶ್ರೀಹರಿಯಿಂದ ಎಲ್ಲವೂ ಹುಟ್ಟುತ್ತದೆ. ಎಂದು ಹೇಳಿರುವುದರಿಂದ ಯಾವ ಅಂಗದಿಂದ ಯಾವ ದೇವತೆಗಳು ಜಡಗಳು ಹುಟ್ಟಿದವು ಎಂಬುದನ್ನು ಹೇಳುತ್ತಾರೆ.

ಈ ಪ್ರಕೃತನಾದ ಅಕ್ಷರನಾಮಕನಾದ ಶ್ರೀಹರಿಯ ಶಿರಭಾಗದಿಂದ ಅಗ್ನಿಯು ಹುಟ್ಟಿದನು. ಎಲ್ಲವನ್ನು ಭಕ್ಷಿಸುವ ಕಾರಣದಿಂದ ಅಗ್ನಿನಾಮಾಂಕಿತನಾದ ಶ್ರೀಹರಿಯು, ಅಗ್ನಿಜನಕನಾಗಿದ್ದಾನೆ. ಶ್ರೇಷ್ಠವಾದ ಮೂರ್ಧ್ನಾಭಾಗದಿಂದ ಹುಟ್ಟಿರುವುದರಿಂದ

ಅಗ್ನಿಗೆ ಅಗ್ನಿ ಎಂಬ ಹೆಸರು ಬರುತ್ತದೆ. "ಗೋಭಿಃ ಕ್ಷೀಣೀತ ಮತ್ಸರಮ್" ಎಂಬಲ್ಲಿಯಂತೆ ಕಾರ್ಯಕಾರಣಗಳಿಗೆ ಅಭೇದವು ಹೇಳಲ್ಪಟ್ಟಿರುತ್ತದೆ. ಹೀಗೆಯೇ ಮುಂದೆಲ್ಲಾ ಕಡೆ ತಿಳಿಯಬೇಕು. ಕಣ್ಣುಗಳಿಂದ ಚಂದ್ರ ಸೂರ್ಯರು ಹುಟ್ಟಿದರು. ಆಹ್ಲಾದಕತ್ವಾದಿ ಕಾರಣಗಳಿಂದ ಚಂದ್ರ ಸೂರ್ಯ ನಾಮಕನಾಗಿ, ಚಂದ್ರ ಸೂರ್ಯ ಜನಕನಾಗಿದ್ದಾನೆ. ಕಿವಿಗಳಿಂದ ದಿಕ್ಕುಗಳನ್ನು ಹುಟ್ಟಿಸಿದನು. ಅಭೀಷ್ಟಗಳನ್ನು ಕೊಡುತ್ತಾನೆ ಎಂಬ ನಿಮಿತ್ತನಾಗಿ ದಿಕ್‌ನಾಮಕನಾಗಿ ದಿಕ್ಕಿಗಳಿಗೆ ಜನಕನಾಗಿದ್ದಾನೆ. ಭಗವಂತನ ವಾಕ್‌ಗಳು ವಿವೃತಶಬ್ದಿತವಾದ ವಿಸ್ತೀರ್ಣವಾದ ವೇದಜನಕನಾಗಿದ್ದಾವೆ. ಅಥವಾ ವಿವೃತಿಯ ಅಭಿವ್ಯಕ್ತಿಗೆ ಕಾರಣನಾಗಿದ್ದಾವೆ. ಭಗವಂತನ ಪ್ರಾಣವು ವಾಯುವಿಗೆ ವಾಯುನಾಮಕವಾಗಿ ಜನಕವಾಗಿದೆ. ವಿಶ್ವನಾಮಕವಾದವನು ಒಬ್ಬ ದೇವತೆಯು. ಅವನು ಶ್ರೀಹರಿಯ ಹೃದಯದಿಂದ ವಿಶ್ವಕ್ಕೆ ಜನಕನಾಗಿದ್ದಾನೆ. ಪಾದಗಳಿಂದ ವಿಸ್ತೃತಾರ್ಥಕನಾಗಿ ಪೃಥಿವೀ ಶಬ್ದ ನಾಮಕನಾಗಿ ಪೃಥಿವಿಯ ಜನಕನಾಗಿದ್ದಾನೆ. "ಪದ್ಭ್ಯಾಂ ಪೃಥಿವಿ" ಎಂದು ಅಂತ್ಯದಲ್ಲಿಯೂ ಸಹ "ಅಗ್ನಿಂ ಮೂರ್ಧಾ" ಇತ್ಯಾದಿಗಳಲ್ಲಿಯೂ ಸಹ ಜನ್ಯಜನಕಭಾವವಿದೆಯೆಂದು ಸೂಚಿಸುತ್ತದೆ ಈ ಶಬ್ದವು. "ಪದ್ಭ್ಯಾಂ ಭೂಮಿ" ಎಂಬ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣವಾಗಿದೆಂದು ಸೂಚಿಸುತ್ತದೆ. ಶ್ರೀ ಹರಿಯು ಕೇವಲ ಸೃಷ್ಟಿಕರ್ತನಷ್ಟೆ ಅಲ್ಲ ನಿಯಾಮಕನೂ ಆಗಿದ್ದಾನೆಂದು ತಿಳಿಸುತ್ತಾರೆ. ಈ ಹರಿಯು ಸರ್ವಭೂತಗಳ ಒಳಗೆ ಇದ್ದು ಅದಾನಾದಿಗಳನ್ನು ಮಾಡುತ್ತಿದ್ದಾನಾದ್ದರಿಂದ ಅಂತರಾತ್ಮನಾಗಿದ್ದಾನೆ. ಅಂತಹ ಶ್ರೀ ಹರಿಯಿಂದ ಈ ಭೂಮಿಯಲ್ಲಿ ಅಗ್ನಿ ಸಮಿತ್ತುಗಳು ಹುಟ್ಟಿದವು. ಸೂರ್ಯಚಂದ್ರರುಗಳಿಂದ ಮಳೆಯು, ಮಳೆಯಿಂದ ಔಷಧಿಗಳು ಹುಟ್ಟಿದವು.

**ಮಂ ॥ ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ ಸೋಮಾತ್ಪರ್ಜನ್ಯಃ ಓಷಧಯಃ ಪೃಥಿವ್ಯಾಮ್ । ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ ॥ 5 ॥**

**ಖಂಡಾರ್ಥ : ಏವಂ ಅಂಗೇಭ್ಯಃ ಉತ್ಪತ್ತಿಮುಕ್ತ್ವಾ ಸ್ತ್ರಿಯಾಮುತ್ಪತ್ತಿಮಾಹ – ಪುಮಾನಿತ್ಯಾದಿನಾ ॥ ಪೂರ್ಣತ್ವೇನ ಹೇತುನಾ ಪುಮಾನ್ನಾಮಾ ವಾಸುದೇವೋ ಯೋಷಿತಾಯಾಂ ಯೋಷಿತಿ, ಹಲಂತಾದ್ದೇತಿ ಟಾಪ್, ರಮಾಯಾಂ ರೇತಃ ಸಿಂಚತಿ ।**

ಪ್ರಲಯೋ ಸ್ವೋದರೆ ನಿವೇಶಿತಂ ಜಗತ್ ರೇತೋವತ್ ರಮಾಯಾಂ ನಿದಧಾತೀತ್ಯರ್ಥಃ । ತತೋ ಬಹ್ವೀಃ ಬಹ್ವಃ ಪ್ರಜಾಃ ಪುರುಷಾತ್ ಪೂರ್ಣಗುಣಾದ್ವಾಸುದೇವಾತ್ ಸಂಪ್ರಸೂತಾಃ॥

ಈ ರೀತಿಯಲ್ಲಿ ಅಂಗಗಳಿಂದ ಉತ್ಪತ್ತಿಯನ್ನು ಹೇಳಿ ಸ್ತ್ರೀಯರುಗಳ ಉತ್ಪತ್ತಿಯನ್ನು ಹೇಳುತ್ತಾರೆ.

ಪೂರ್ಣನಾದ್ದರಿಂದ 'ಪುಮಾನ್' ನಾಮಕವಾದ ವಾಸುದೇವನು, ರಮಾದೇವಿಯಲ್ಲಿ ರೇತಸ್ಸನ್ನು ಸಿಂಚಿಸುತ್ತಾನೆ. ಪ್ರಲಯದಲ್ಲಿ ತನ್ನ ಉದರದಲ್ಲಿ ಪ್ರವಿಷ್ಟವಾದ ಜಗತ್ತನ್ನು ರೇತಸ್ಸಿನಂತೆ ರಮಾದೇವಿಯಲ್ಲಿ ಹಾಕುತ್ತಾನೆ. ಆ ಮೇಲೆ ಪುರುಷ ನಾಮಕವಾದ ಶ್ರೀ ವಾಸುದೇವನಿಂದ ಬಹಳ ಪ್ರಜೆಗಳು ಉತ್ಪನ್ನರಾದರು.

**ಮಂ ॥ ತಸ್ಮಾದೃಚಃ ಸಾಮಯಜೂಂಷಿ ದೀಕ್ಷಾ ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ । ಸಂವತ್ಸರಶ್ಚ ಯಜಮಾನಶ್ಚ ಲೋಕಾಃ ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥ 6 ॥**

ಖಂಡಾರ್ಥ : ನ ಕೇವಲಂ ಪ್ರಜಾಃ ಅನ್ಯದಪೀತ್ಯಾಹ – ತಸ್ಮಾದಿತಿ ॥ ಪುರುಷಾದಿತ್ಯರ್ಥಃ । ಋಚ ಇತ್ಯಾದೌ ಸಂಪ್ರಸೂತಪದಾನುಷಂಗೋ ಯಥಾಯೋಗ್ಯಂ ಧ್ಯೇಯಃ । ತತ್ರ ಪ್ರಸವೋಽಭಿವ್ಯಕ್ತಿಃ । ಯಜ್ಞಾ ಅಗ್ನಿಹೋತ್ರಾದಯಃ । ಸರ್ವೇ ಕ್ರತವಃ ಸೋಮಯಾಗಾಃ ಪಶುಸಂಬದ್ಧಾಃ । ಅತ್ರ ಋಗಾದಿಶಬ್ದೈಸ್ತದಭಿಮಾನಿನಶ್ಚ ಗ್ರಾಹ್ಯಾಃ । ಯಜಮಾನಃ ಯಜ್ಞಕ್ರತೂನಾಂ ಅನುಷ್ಠಾತಾ ಸಂಪ್ರಸೂತ ಇತ್ಯರ್ಥಃ । ಲೋಕಾ ಇತ್ಯುಕ್ತಂ, ತೇಕೇ ಲೋಕಾಃ ಇತ್ಯತ ಆಹ – ಸೋಮಶ್ಚಂದ್ರೋ ಯತ್ರ ಪವತೆ ಚರತಿ, ಸೂರ್ಯೋ ಯತ್ರ ಪವತೇ ತೇ ಲೋಕಾಃ ಇತ್ಯರ್ಥಃ ॥

ಕೇವಲ ಪ್ರಜೆಗಳು ಮಾತ್ರ ಉತ್ಪತ್ತಿಯಲ್ಲ, ಬೇರೆಯ ಪದಾರ್ಥಗಳೂ ಉತ್ಪನ್ನವಾದವೆಂದು ಹೇಳುತ್ತಾರೆ.

ಪುರುಷನಾಮಕನಾದ ಶ್ರೀ ಹರಿಯಿಂದ, ಋಗ್ವೇದ, ಅದರ ಅಭಿಮಾನಿಗಳೂ, ಸಾಮವೇದ, ಅದರ ಅಭಿಮಾನಿಗಳೂ, ಯಜುರ್ವೇದ, ಅದರ ಅಭಿಮಾನಿಗಳೂ ಉತ್ಪನ್ನರಾದರು. ಇಲ್ಲಿ ವೇದಗಳ ವಿಷಯಗಳಲ್ಲಿ ಅಭಿವ್ಯಕ್ತಿಯನ್ನು ತಿಳಿಯಬೇಕು ಅಗ್ನಿಹೋತ್ರಾದಿ ಯಜ್ಞಗಳೂ, ಅದರ ದೀಕ್ಷಾವಿಶೇಷಗಳೂ, ಎಲ್ಲಾ

ಸೋಮಯಾಗಗಳೂ, ಸಂವತ್ಸರಗಳೂ, ಯಜ್ಞಗಳ ಅನುಷ್ಠಾನ ಮಾಡುವ ಯಜಮಾನನು ಹುಟ್ಟಿದನು. ಸೂರ್ಯಚಂದ್ರರು ಸಂಚರಿಸುವ ಲೋಕಗಳನ್ನೂ ಸಹ ಸೃಷ್ಟಿಸಿದನು.

**ಮಂ ॥ ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ । ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥ 7 ॥**

ಖಂಡಾರ್ಥ : ತಸ್ಮಾತ್ಪುರುಷಾದ್ಯೋಷಿದ್ದ್ವಾರಾ ದೇವಾಃ ಬಹುಧಾ ಸಂಪ್ರಸೂತಾಃ । ತಥಾ ಸಾಧ್ಯಾದಯೋಽಪಿ ಸಂಪ್ರಸೂತಾಃ । ವಯಾಂಸಿ ಪಕ್ಷಿಣಃ ತಪಶ್ಚ ಕೃಚ್ಛ್ರಚಾಂದ್ರಾಯಣಾದಿ ಶ್ರದ್ಧಾ ಆಸ್ತಿಕ್ಯ ಬುದ್ಧಿಃ । ಸತ್ಯಂ ಯಥಾರ್ಥವಚನಮ್ । ಸಂಪ್ರಸೂತಪದಸ್ಯ ಯಥಾಯೋಗಮನುಷಂಗಸ್ಸರ್ವತ್ರ ಜ್ಞೇಯಃ ॥

ಪುರುಷನಾಮಕನಾದ ಶ್ರೀಹರಿಯಿಂದ ಸ್ತ್ರೀದ್ವಾರಾ ಬಹಳ ದೇವತೆಗಳು, ಸಾಧ್ಯರುಗಳು, ಮನುಷ್ಯರುಗಳು, ಪಶುಗಳು, ಪಕ್ಷಿಗಳು, ಪ್ರಾಣಾಪಾನರುಗಳು, ಭತ್ತಗೋಧಿಗಳೂ, ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸುಗಳು, ಆಸ್ತಿಕ್ಯ ಬುದ್ಧಿಯು, ಯಥಾರ್ಥವಚನರೂಪವಾದ ಸತ್ಯತೆಯು, ಬ್ರಹ್ಮಚರ್ಯೆಯು, ವಿಧಿಗಳು ಉತ್ಪನ್ನವಾದವು.

**ಮಂ ॥ ಸಪ್ತಪ್ರಾಣಾಃ ಪ್ರಭವಂತಿ ತಸ್ಮಾಸ್ಸಪ್ತಾರ್ಚಿಷಃ ಸಮಿಧಃ ಸಪ್ತ ಹೋಮಾಃ । ಇಮೇ ಲೋಕಾಃ ಯೇಷು ಚರಂತಿ ಪ್ರಾಣಾ ಗುಹಾಶಯಾಂ ನಿಹಿತಾಃ ಸಪ್ತ ಸಪ್ತ ॥ 8 ॥**

ಖಂಡಾರ್ಥ : ಸಪ್ತ ಪ್ರಾಣಾಃ ಘ್ರಾಣರಸನಚಕ್ಷುಃ ಶ್ರೋತ್ರತ್ವಜಮನೋಬುದ್ಧಿರೂಪಾಣಿ ಸಪ್ತೇಂದ್ರಯಾಣಿ ಪ್ರಭವಂತಿ ತಸ್ಮಾತ್ಪುರುಷಾತ್ ಯೋಷಿದ್ವಾರೇತಿ ಭಾವಃ । ತೇನ 'ಏತಸ್ಮಾಜ್ಜಾಯತೇ ಪ್ರಾಣೋ ಮನಃ' ಇತ್ಯಾದಿನಾ ಪೂರ್ವತ್ರೇಂದ್ರಿಯಾಣಾಂ ಸೃಷ್ಟ್ಯುಕ್ತಾವಪೀಹ ಯೋಷಿದ್ದ್ವಾರಕಸೃಷ್ಟುಕ್ತೇರ್ನ ಪುನರುಕ್ತಿರಿತಿ ಜ್ಞೇಯಂ । ಸಪ್ತಾರ್ಚಿಷಸ್ಸಪ್ತೇಂದ್ರಿಯವೃತ್ತಯಃ । ಸಮಿಧಃ ಗಂಧಾದಿವಿಷಯಾಃ । ಹೋಮಾ

ಇಂದ್ರಿಯಾಣಾಂ ವಿಷಯೈಃ ಸಂಬಂಧಾಸ್ಸಪ್ತೇತ್ಯರ್ಥಃ । ಇಮೇ ಲೋಕಾಃ ಸಪ್ತ, ತೇ ಕೇ ಲೋಕಾಃ ಇತ್ಯತ ಆಹ – ಯೇಷು ಸ್ಥಿತ್ವಾ ಪ್ರಾಣಾಸ್ಸಪ್ತ ಚರಂತಿ । ವಿಷಯೈಃ ಸಹ ಸಂಬದ್ಧಾ ಭವಂತೀತ್ಯರ್ಥಃ । ಇಂದ್ರಿಯಾಗೋಲಕಾ ಇತಿ ಯಾವತ್ । ಕಿಮರ್ಥಂ ಸೃಷ್ಟಾಃ ಪ್ರಾಣಾಃ ಇತ್ಯತ ಆಹ – ಗುಹಾಶಯಂ ಗುಹಾಶಯಾಯಾಂ, ಗುಹಾ ಹೃದಯಮಾಶಯಃ ಸ್ಥಾನಂ ಯಸ್ಯಾಸ್ತಸ್ಯಾಂ ಬುದ್ಧೌ, ನಿಮಿತ್ತ ಸಪ್ತಮಿ । ಪ್ರಾಣಿನಾಂ ಜ್ಞಾನೋತ್ಪತ್ತ್ಯರ್ಥಂ ಪ್ರತಿಶರೀರಂ ಸಪ್ತಸಪ್ತ ಪ್ರಾಣಾಃ ನಿಹಿತಾಃ ಸಂತೋ ಯೇಷು ಚರಂತಿ ತೇ ಲೋಕಾಃ ಇತ್ಯನ್ವಯಃ । ತಥಾಚ ಸೂತ್ರಂ "ಸಪ್ತ ಗತೇರ್ವಿಶೇಷಿತತ್ವಾಚ್ಚ" ಇತಿ ॥

ಶ್ರೀಹರಿಯಿಂದ ಸ್ತ್ರೀ ದ್ವಾರಾ ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮ, ಮನಸ್ಸು, ಬುದ್ಧಿಯೆಂಬ ಏಳು ಇಂದ್ರಿಯಗಳೂ ಹುಟ್ಟಿದವು. "ಏತಸ್ಮಾತ್ ಜಾಯತೇ ಪ್ರಾಣಃ" ಎಂಬ ವಾಕ್ಯದಿಂದ ಹಿಂದೆ ಇಂದ್ರಿಯಗಳ ಸೃಷ್ಟಿಯನ್ನು ಹೇಳಿದ್ದರೂ ಸಹ ಸ್ತ್ರೀದ್ವಾರಾ ಏಳು ಇಂದ್ರಿಯಗಳ ವೃತ್ತಿಗಳೂ, ಗಂಧಾದಿವಿಷಯಗಳೂ, ಇಂದ್ರಿಯ ವಿಷಗಳಿಗೆ ಸಂಬಂಧ ರೂಪವಾದ ಸಪ್ತ ಹೋಮಗಳೂ, ಹುಟ್ಟಿ ಎಲ್ಲಿ ನಿಂತು ಇಂದ್ರಿಯಗಳು ವಿಷಯಗಳಿಂದ ಸಂಬಂಧವಾಗುತ್ತದೆಯೋ ಅಂತಹ ಇಂದ್ರಿಯಗಳ ಗೋಲಕಗಳೂ, ಸೃಷ್ಟಿಸಲ್ಪಟ್ಟವು. ಹೃದಯಸ್ಥಾನವಾದ ಬುದ್ಧಿಯಲ್ಲಿ ಪ್ರಾಣಿಗಳಿಗೆ ಜ್ಞಾನದ ಉತ್ಪತ್ತಿಗೋಸ್ಕರವಾಗಿ ಪ್ರತಿ ಶರೀರದಲ್ಲಿಯೂ ಏಳು ಇಂದ್ರಿಯಗಳಿರುತ್ತವೆ. ಅಂತಹ ಶರೀರಗಳು ಸಂಚರಿಸುವ ಲೋಕಗಳನ್ನು ಸೃಷ್ಟಿಮಾಡಿದನು. "ಸಪ್ತಗತೇಃ ವಿಶೇಷಿತತ್ವಾತ್" ಎಂಬ ಸೂತ್ರದಲ್ಲಿ ಈ ವಿಷಯವು ನಿರೂಪಿಸಲ್ಪಟ್ಟಿದೆ.

**ಮಂ ॥ ಅತಃ ಸಮುದ್ರಾ ಗಿರಯಶ್ಚ ಸರ್ವೇಽಸ್ಮಾತ್ಸ್ಯಂದಂತೇ ಸಿಂಧವಃ ಸರ್ವರೂಪಾಃ । ಅತಶ್ಚ ಸರ್ವಾ ಓಷಧಯೋ ರಸಾಶ್ಚ ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ ॥ 9 ॥**

ಖಂಡಾರ್ಥ : ಅತೋಽಸ್ಮಾತ್ಪುರುಷಾತ್ಪ್ರಭವಂತೀತ್ಯನುಷಂಗಃ । ಸರ್ವರೂಪಾಃ ಸರ್ವದಿಜಮುಖಾಃ ಸಿಂಧವೋ ನದ್ಯಃ ಅಸ್ಮಾತ್ಪುರುಷಾತ್ ಸ್ಯಂದಂತೇ ಪ್ರವಹಂತಿ । ರಸಾಶ್ಚ ಪ್ರಭವಂತೀತಿ ಯೋಜ್ಯಮ್ । ಯೇನ ಪುರುಷೇಣ ಯೋಷಿದ್ದ್ವಾರಾ ಸೃಷ್ಟೈರ್ಭೂತೈಸ್ಸಹಾಂತರಾತ್ಮಾ ಅಂತರ್ಯಾಮಿರೂಪೀ ತಿಷ್ಠತೇ ತಿಷ್ಠತಿ ಸ ಪುಮಾನೇತತ್ಸರ್ವಂ ಸಸರ್ಜೇತ್ಯರ್ಥಃ ॥

ಶ್ರೀಹರಿಯಿಂದ ಸ್ತ್ರೀದ್ವಾರಾ ಎಲ್ಲಾ ಸಮುದ್ರಗಳು, ಪರ್ವತಗಳು, ಎಲ್ಲಾ ದಿಕ್ಕುಗಳೂ ಹುಟ್ಟುತ್ತವೆ. ಇವನಿಂದಲೇ ನದಿಗಳು ಹರಿಯುತ್ತವೆ. ಇವನಿಂದಲೇ ರಸಗಳು ಉತ್ಪನ್ನವಾಗುತ್ತವೆ. ಯಾವ ಪುರುಷನಿಂದ ಸ್ತ್ರೀದ್ವಾರಾ ಸೃಷ್ಟಿಯಾದ ಭೂತಗಳಲ್ಲಿ ಅಂತರ್ಯಾಮಿಯಾಗಿ, ನಿಯಾಮಕನಾಗಿ ಶ್ರೀಹರಿ ಇರುತ್ತಾನೆಯೋ, ಆ ಶ್ರೀಹರಿಯೇ ಇವೆಲ್ಲವನ್ನೂ ಸೃಷ್ಟಿಸಿದನು.

**ಮಂ ॥ ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್। ಏತದ್ಯೋವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತಿ ಹ ಸೌಮ್ಯ ॥ 10 ॥**

ಖಂಡಾರ್ಥ : ತಪಸಾ ಜ್ಞಾನೇನ ಚೀಯತೇ ಸಂಬಧ್ಯತೇ ಇತ್ಯತ್ರ ಬ್ರಹ್ಮಣೋ ಜ್ಞಾನಸ್ಯ ಚ ಭೇದಃ ಪ್ರತೀಯತೇ । ಅಕ್ಷರಾತ್ಸಂಭವತೀಹ ವಿಶ್ವಮಿತ್ಯನೇನೋಕ್ತ ಸೃಷ್ಟಿಕ್ರಿಯಯಾ ತದಾಕ್ಷಿಪ್ತಬಲಾದಿನಾಚ ಲೋಕೇ ಇವ ಭೇದಃ ಪ್ರತೀಯತೇ । ತಾಂ ಭೇದಪ್ರತೀತಿಂ ನಿವಾರಯನ್ ಭಗವದಭೇದಂ ಜ್ಞಾನಾದೇರಾಹ – ಪುರುಷ ಏವೇತ್ಯಾದಿನಾ ॥ ಕರ್ಮ ಸೃಷ್ಟಿಕ್ರಿಯಾ । ತಪೋಜ್ಞಾನಮ್ ಉಪಲಕ್ಷಣಮೇತತ್ ದ್ಯುತಿಬಲಾದೇರ್ಧರ್ಮಜಾತಸ್ಯ । ತಥಾ ಚ ಕರ್ಮತಪಃಪ್ರಭೃತೀದಂ ವಿಶ್ವಂ ಸರ್ವಂ ಧರ್ಮಜಾತಂ ಪರಾಮೃತಂ ಪರಾಮೃತಾಖ್ಯೋ ಬ್ರಹ್ಮಶಬ್ದಿತಃ ಪುರುಷ ಏವ ಭಗವಾನೇವ, ನತು ಧರ್ಮಧರ್ಮಿಣೋರ್ಭೇದೋ ಭಗವತಿ ಮಂತವ್ಯ ಇತಿ । ತದಾಹ ಸೂತ್ರಂ "ಪ್ರತಿಷೇಧಾಚ್ಚ" ಇತಿ । 'ಏಕಮೇವಾದ್ವಿತೀಯಂ' "ನೇಹನಾನಾಸ್ತಿ ಕಿಂಚನ" ಇತಿ ಭೇದಸ್ಯ ನಿಷೇಧಾದಿತ್ಯರ್ಥಃ। ಏತಜ್ಞಾನಿನಃ ಫಲಮಾಹ–ಏತದ್ಯೋವೇದೇತಿ ॥ ಏತತ್ಸ್ರಷ್ಟತ್ವಾದಿಗುಣೈಃಸ್ವವಿಶೇಷಾ–ಭಿನ್ನತಯಾ ವಿಶಿಷ್ಟಂ, ಸರ್ವಪ್ರಾಣಿಹೃದಯಗುಹಾಯಾಂ ನಿಹಿತಂ ಬ್ರಹ್ಮ ಯೋಽಧಿಕಾರೀ ವೇದ ಸೋಽವಿದ್ಯಾಗ್ರಂಥಿಂ ಪ್ರಕೃತಿಬಂಧಂ ವಿಕಿರತಿ ಕೃ ವಿಕ್ಷೇಪೆ, ವಿಕ್ಷಿಪತಿ ನಿರಸ್ಯತಿ, ಮುಕ್ತೋ ಭವತೀತ್ಯರ್ಥಃ । ಸೋಮ್ಯ ಸೋಮಪಾನಾರ್ಹೇತಿ ಶೌನಕ ಸಂಬೋಧನಮ್ । ಹೇತಿ ಹರ್ಷೇ ॥

ತಪಸ್ಸಿನಿಂದ, ಜ್ಞಾನದಿಂದ ಸಂಬಂಧಿತನಾಗುತ್ತಾನೆ. ಎಂದಾಗ ಬ್ರಹ್ಮನಿಗೂ ಜ್ಞಾನಕ್ಕೂ ಭೇದವು ತಿಳಿಯುತ್ತದೆ. ಅಕ್ಷರನಾಮಕನಾದ ಶ್ರೀ ಹರಿಯಿಂದ ಜಗತ್ತು ಸೃಷ್ಟಿಯಾಗಿದೆ.

ಎಂದಾಗ ಸೃಷ್ಟಿಕರ್ತೃತ್ವದಿಂದ ಆಕ್ಷಿ, ಪ್ರವಾದ, ಬಲಾದಿಗಳು ಲೋಕದಲ್ಲಿ ವ್ಯಕ್ತಿಯಿಂದ ಭಿನ್ನವಾಗಿ ಕಾಣುತ್ತವೆ. ಆ ಭೇದಜ್ಞಾನವನ್ನು ನಿರಾಕರಿಸಿ, ಜ್ಞಾನಾದಿಗಳಿಗೂ ಶ್ರೀಹರಿಗೂ ಅಭೇದವನ್ನು ಹೇಳುತ್ತಾರೆ.

ಸೃಷ್ಟಿಕ್ರಿಯೆಯು, ಜ್ಞಾನವು, ಉಪಲಕ್ಷಣಗಳಿಂದ ಬಲಪ್ರಕಾಶಾದಿಗಳ ಸಮುದಾಯವು ಕರ್ಮ, ತಪಸ್ಸೇ ಮೊದಲಾದ ಸಮಸ್ತ ಧರ್ಮಗಳ ಸಮುದಾಯವು ಪರಾಮೃತನಾಮಕನಾದ ಶ್ರೀಹರಿಯೇ. ಅಂದರೆ ಶ್ರೀ ಹರಿಯಲ್ಲಿರುವ ಧರ್ಮಗಳಿಗೆ ಭೇದವು ಇರುವುದಿಲ್ಲ. ಅದನ್ನು "ಪ್ರತಿಷೇಧಾಚ್ಚ" ಎಂಬ ಸೂತ್ರದಲ್ಲಿಯೂ, "ಏಕಮೇವಾದ್ವಿತೀಯಂ", "ನೇಹ ನಾನಾಸ್ತಿ" ಎಂಬ ಶ್ರುತಿ ವಾಕ್ಯಗಳಲ್ಲಿಯೂ ನಿರೂಪಿಸಲಾಗಿದೆ. ಈ ರೀತಿಯಲ್ಲಿ ಶ್ರೀ ಹರಿಯು ಗುಣ ಧರ್ಮಗಳಿಂದ ಅಭೇದಜ್ಞಾನವುಳ್ಳವರಿಗೆ ಫಲವನ್ನು ಹೇಳುತ್ತಾರೆ. ಸೋಮಪಾನಾರ್ಹರಾದ ಶೌನಕರೇ, ಯಾವ ಅಧಿಕಾರಿಯು ಸೃಷ್ಟತ್ವಾದಿಗುಣಗಳಿಂದ ಸವಿಶೇಷಾಭೇದವುಳ್ಳ ಸರ್ವ ಪ್ರಾಣಿಗಳ ಹೃದಯಗುಹೆಯಲ್ಲಿ ವಾಸವಾಗಿರುವ ಶ್ರೀ ಹರಿಯನ್ನು ತಿಳಿಯುತ್ತಾನೆಯೋ ಅವನಿಗೆ ಈ ಸಂಸಾರವೆಂಬ ಗ್ರಂಥಿಯು ನಾಶವಾಗುತ್ತದೆ. ಅವನು ಮುಕ್ತನಾಗುತ್ತಾನೆ. ಹ ಎಂಬ ಶಬ್ದವು ಸಂತೋಷವೆಂಬರ್ಥದಲ್ಲಿದೆ.

**ಇತಿ ತೃತೀಯಃ ಖಂಡಃ**

# ಅಥ ಚತುರ್ಥಃ ಖಂಡಃ

**ಮಂ ॥ ಆವಿಃ ಸನ್ನಿಹಿತಂ ಗುಹಾಚರಂ ನಾಮ ಮಹತ್ಪದಂ ।**
**ಅತ್ರೈತತ್ಸರ್ವಮರ್ಪಿತಮೇಜತ್ಪ್ರಾಣನ್ನಿಮಿಷಚ್ಚ ಯತ್ ॥ 1 ॥**

ಖಂಡಾರ್ಥ : ಪುನರ್ಭಗವತೋ ಮಹಿಮಾಂತರಮುಪದಿಷ್ಟವಾನಂಗಿರಾಃ ಶೌನಕಂ ಪ್ರತೀತ್ಯಾಹ ವೇದಪುರುಷಃ – ಆವಿರಿತ್ಯಾದಿನಾ ॥ ಆವಿರ್ನಿತ್ಯಾಭಿವ್ಯಕ್ತಸ್ವರೂಪಮ್ । ವ್ಯಾಪ್ತತ್ವಾತ್ಸರ್ವಸನ್ನಿಹಿತಮ್ । ಗುಹಾಚರಂ ಹೃದಯಗುಹಾಯಾಂ ಚರತೀತಿ ಗುಹಾಚರಮ್। ಪದ್ಯತೇ ಪ್ರಾಪ್ಯತೇ ಇತಿ ಪದಮ್ । ಮಹದುತ್ತಮಂ । ಪ್ರಾಪ್ಯಂ ನಾಮ ಪ್ರಸಿದ್ಧಮ್, ಉಕ್ತಗುಣತ್ವೇನ ಪ್ರಸಿದ್ಧಮಿತ್ಯರ್ಥಃ । ಅತ್ರ ಆವಿರಾದಿಗುಣಯುಕ್ತೇ ಭಗವತಿ ಏತತ್ಸರ್ವಮರ್ಪಿತಮಾಶ್ರಿತಮ್ । ತತ್ಸರ್ವಂ ಕಿಮಿತ್ಯತ ಆಹ – ಏಜದಿತಿ ॥ ಏಜೃ ಕಂಪನೆ, ಸಾಮಾನ್ಯ ಚೇಷ್ಟೋಪೇತಮ್ । ಪ್ರಾಣಾದ್ವಿಶೇಷಚೇಷ್ಟಾಯುಕ್ತಮ್ । ನಿಮಿಷತ್ ಚಕ್ಷುಷೀ ನಿಮೀಲ್ಯ ಸ್ಥಿತಮ್, ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೋಪೇತಮ್, ಯದೇತಜ್ಜಗಜ್ಜಾನಥ ಜಾನಾಸಿ ತತ್ಸರ್ವಮತ್ರಾರ್ಪಿತಮಿತ್ಯರ್ಥಃ ॥

ಮತ್ತೆ ಅಂಗಿರರು ಶೌನಕರಿಗೆ ಶ್ರೀ ಹರಿಯು ಬೇರೆ ಮಹಿಮೆಗಳನ್ನು ನಿರೂಪಿಸುತ್ತಾರೆ. ನಿತ್ಯಾವ್ಯಕ್ತ ಸ್ವರೂಪನಾದ, ಸರ್ವ ಪದಾರ್ಥಗಳಲ್ಲಿ ಸನ್ನಿಹಿತನಾದ ಹೃದಯಗುಹೆಯಲ್ಲಿ ಸಂಚರಿಸುವ ಉತ್ತಮನಾದ, ಹೊಂದಲು ಯೋಗ್ಯವಾದ ಶ್ರೀ ಹರಿಯಲ್ಲಿ ಎಲ್ಲಾ ಪದಾರ್ಥಗಳು ಆಶ್ರಿತವಾಗಿದೆ. ಸಮಸ್ತಭಾಷೆಗಳಿಂದ ಕೂಡಿದ, ವಿಶೇಷ ಚೇಷ್ಟೆಗಳುಳ್ಳ ಕಣ್ಣುಗಳನ್ನು ಮಿಟುಕಿಸಿ ಕೂಡಿದಂತ, ಜಾಗೃತಸ್ವಪ್ನಸುಷುಪ್ತಿ ಅವಸ್ಥೆಗಳಿಂದ ಕೂಡಿದ ಈ ಸಮಸ್ತ ಜಗತ್ತನ್ನು ನೀನು ಏನು ತಿಳಿದಿದ್ದೀಯೆ, ಆ ಜಗತ್ತು ಶ್ರೀ ಹರಿಯಲ್ಲಿ ಆಶ್ರಿತವಾಗಿದೆ.

**ಮಂ ॥ ಏತಜ್ಜಾನಥ ಸದಸದ್ವರೇಣ್ಯಂ ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಮ್ । ಯದರ್ಚಿಮದ್ಯದಣುಭ್ಯೋಽಣು ಚ ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ ॥ 2 ॥**

ಖಂಡಾರ್ಥ : ಪುನಃ ಕಿಂ ರೂಪಂ ಬ್ರಹ್ಮೇತ್ಯತ ಆಹ – ಸದಸದಿತಿ ತದಕ್ಷರಂ ಸದಸದ್ಭ್ಯಾಂ ಮೂರ್ತಾಮೂರ್ತಾಭ್ಯಾಂ ಕಾರ್ಯಕಾರಣಾಭ್ಯಾಂ ವಾ ವರೇಣ್ಯಂ ಶ್ರೇಷ್ಠಂ, ವೃಞ ಏಣ್ಯಪ್ರತ್ಯಯಃ॥ ವಿಜ್ಞಾನಾತ್ ಚತುರ್ಮುಖಾತ್ ಪರಮುತ್ತಮಂ, "ವಿಜ್ಞಾನಶಕ್ತಿರಹಮಾ-ಸಮನಂತಶಕ್ತೇ"ರಿತ್ಯಾದೇಃ । ಪ್ರಜಾನಾಂ ವರಿಷ್ಠಮ್ ಶ್ರೇಷ್ಠಮ್ । ಯದರ್ಚಿಮದರ್ಚಿಷ್ಮತ್, ಯಚ್ಚಾಣುಭ್ಯೋಽಣು ಚ, ಯಸ್ಮಿನ್ ಲೋಕಾ ಲೋಕಿನೋ ಲೋಕಸ್ಥಾ ಜನಾಃ ಲೋಕಾಭಿಮಾನಿನೋ ವಾ ನಿಹಿತಾಃ ತದೇತದುಕ್ತಗುಣವಿಶಿಷ್ಟಮಕ್ಷರಂ ಬ್ರಹ್ಮೇತ್ಯರ್ಥಃ ॥

ಮಾರ್ತಾಮೂರ್ತ ಪದಾರ್ಥಗಳಿಂದ, ಕಾರ್ಯಕಾರಣ ಪದಾರ್ಥಗಳಿಂದ ಶ್ರೇಷ್ಠನಾದ, ಚತುರ್ಮುಖ ಬ್ರಹ್ಮದೇವರಿಗಿಂತ ಉತ್ತಮನಾದ, ಪ್ರಜೆಗಳಿಗಿಂತ ಉತ್ತಮವಾದ ಯಾವುದು ಪ್ರಕಾಶಮಾನವಾಗಿದೆಯೋ, ಅಣುಪದಾರ್ಥಗಳಿಂದ ಅಣುವಾದ, ಯಾವನಲ್ಲಿ ಲೋಕಗಳು ಲೋಕದಲ್ಲಿರುವ ಪ್ರಜೆಗಳೂ ಆಶ್ರಿತವಾಗಿದ್ದಾರೆಯೋ ಅಂತಹ ಗುಣಗಳುಳ್ಳವನು ಶ್ರೀಹರಿಯು. ಆ ಅಕ್ಷರನಾಮಕನಾದ ಶ್ರೀ ಹರಿಯು ಜಗತ್ತನ್ನು ಪ್ರೇರಿಸುತ್ತಾನೆ.

**ಮಂ ॥ ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ ।**
**ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥ 3 ॥**

ಖಂಡಾರ್ಥ : ಮಹಿಮಾಂತರಮಾಹ – ಸ ಪ್ರಾಣ ಇತಿ ॥ ಪ್ರಾಣ ಇತಿ ವಿಧೇಯಾಪೇಕ್ಷಯಾ ಸ ಇತಿ ಪುಲ್ಲಿಂಗನಿರ್ದೇಶಃ । ಪ್ರಕರ್ಷೇಣ ಅನಿತಿ ಚೇಷ್ಟತೇ, ಜಗತ್ಪ್ರೇರಯತೀತಿ ಪ್ರಾಣಃ । ತದಕ್ಷರಂ ವಕ್ತಿ ಸಮಸ್ತವೇದಾನಿತ್ಯೇವ ವಾಕ್, ನತು ಪ್ರಸಿದ್ಧವಾಗಾದ್ಯಭೇದಾದಿತ್ಯೇವಕಾರಾರ್ಥಂ ಉಶಬ್ದಃ । ತದಕ್ಷರಂ ಮನುತೇ ಸರ್ವಂ ಇತಿ ಮನಃ । ತದೇತದಕ್ಷರಂ ಸತ್ಯಂ ಅಪರಾಧೀನಸ್ವರೂಪಮ್ । 'ಷದ್ಲೃ ವಿಶರಣೇ' ಇತಿ ಧಾತೋಃ ಸತಃ ಶರೀರತೋ ವಿಶರಣಶೀಲಾನ್ ಜೀವಾನ್ ಯಮಯತಿ ನಿಯಮಯತೀತಿ ವಾ ಸತ್ಯಂ ತದಮೃತಂ ದೇಹತೋಽಪಿ ನಾಶರಹಿತಂ, ಹೇ ಸೋಮ್ಯ ॥

ಈ ಅಕ್ಷರನನ್ನು ಸಮಸ್ತವೇದಗಳು ಹೇಳುತ್ತವಾದ್ದರಿಂದ ಅವನು ವಾಕ್‌ಶಬ್ದವಾಚ್ಯನು. ವಾಗಾದಿಗಳಿಂದ ಅಭೇದವಿಲ್ಲವೆಂದು ತಿಳಿಸಲು ಉ ಶಬ್ದವು ಇದೆ. ಎಲೈ ಸೌಮ್ಯರೇ ಆ ಅಕ್ಷರನು ಅರಿತು ಎಲ್ಲವನ್ನೂ ತಿಳಿಯುವವನು ಆದ್ದರಿಂದ ಮನಃಶಬ್ದವಾಚ್ಯನು,

ಅಪರಾಧೀನ ಸ್ವರೂಪವುಳ್ಳವನೂ ದೇಹದಿಂದಲೂ ನಾಶರಹಿತನು (ಶರೀರದಿಂದ ನಾಶಹೊಂದುವ ಸಮಸ್ತ ಜೀವರನ್ನೂ ನಿಯಮಿಸುವವನು) ಆಗಿದ್ದಾನೆ.

**ಮಂ ॥ ಧನುರ್ಗೃಹಿತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂದಧೀತ । ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥ 4 ॥**

ಖಂಡಾರ್ಥ : ಔಪನಿಷದಮುಪನಿಷತ್ಸಂಬಂಧಿ ಪ್ರಣವಾಖ್ಯಂ ಧನುರ್ಗೃಹೀತ್ವಾ ವೇದ್ಧವ್ಯಂ ವೇಧನೀಯಂ ತದ್‌ಬ್ರಹ್ಮ ವಿದ್ಧಿ ಜಾನೀಹಿ । ಯಥಾ ವೇಧ್ಯಂ ಲಕ್ಷ್ಯಂ ವಸ್ತು ಧಾನುಷ್ಕಾ ಧನುರ್ಗೃಹೀತ್ವಾ ಶರೇಣ ವಿಧ್ಯಂತಿ ತಥಾ ತ್ವಮಪಿ ಉಪನಿಷದರ್ಥಭೂತಪ್ರಣವಾರ್ಥ ಪರ್ಯಾಲೋಚನಯಾ ಮನಸಾ ಬ್ರಹ್ಮ ಸಾವಧಾನಂ ಜಾನೀಹೀತ್ಯರ್ಥಃ । ವೇದ್ಧವ್ಯಂ ವಿದ್ಧೀತ್ಯುಕ್ತಮೇವ ವ್ಯನಕ್ತಿ – ಮಹಾಸ್ತ್ರಮಿತ್ಯಾದಿನಾ ॥ ಉಪಾಸಾನಿಶಿತಂ ಉಪಾಸಯಾ ತೀಕ್ಷ್ಣೀಕೃತಂ ಶರಂ ಶರವತ್ ಸ್ಥಿತಂ ಮನಃ ತ್ವಂ ಸಂದಧೀತ ಸಂಧತ್ಸ್ವ ವ್ಯತ್ಯಯಾತ್ । ಸಂಯೋಜಯೇತಿ ಯಾವತ್ । ಸಂಧಾನಮೇವ ವ್ಯಕ್ತಮಾಹ – ಆಯಮ್ಯೇತಿ ॥ ತಚ್ಚೇತಃ ಸಮಸ್ತ ವಸ್ತುಭ್ಯೋ ನಿಯಮ್ಯ, ನಿವರ್ತ್ಯೇತಿ ಯಾವತ್, ತದ್ಭಾವಗತೇನ ತದೇಕಸಂಬದ್ಧೇನ ಚೇತಸಾ ಲಕ್ಷ್ಯಂ ಲಕ್ಷ್ಯಭೂತಂ ತದೇವಾಕ್ಷರಂ ಹೇ ಸೋಮ್ಯ ವಿದ್ಧೀತ್ಯರ್ಥಃ ॥

ಉಪನಿಷತ್ತಿಗೆ ಸಂಬಂಧಿಸಿದ ಓಂಕಾರವೆಂಬ ಧನುಸ್ಸನ್ನು ಸ್ವೀಕರಿಸಿ ತಿಳಿಯಲಿಕ್ಕೆ ಯೋಗ್ಯನಾದ ಶ್ರೀ ಹರಿಯನ್ನು ತಿಳಿ. ಯಾವ ರೀತಿಯಲ್ಲಿ ಬೇಡನು ಲಕ್ಷ್ಯವನ್ನೇ ಮನಸ್ಸಿನಲ್ಲಿ ವಿಷಯೀಕರಿಸಿ, ಧನುಸ್ಸನ್ನು ಹಿಡಿದು ಲಕ್ಷ್ಯವನ್ನು ಭೇದಿಸುತ್ತಾನೆಯೋ ಅದೇ ರೀತಿಯಲ್ಲಿ ನೀನೂ ಸಹ ಉಪನಿಷತ್ತಿನ ಅರ್ಥವಾದ ಓಂಕಾರಾರ್ಥವನ್ನು ಆಲೋಚಿಸಿ ಮನಸ್ಸಿನಿಂದ ಶ್ರೀಹರಿಯನ್ನು ತಿಳಿ. ಉಪಾಸನೆಯಿಂದ ತೀಕ್ಷ್ಣವಾದ, ಚೂಪಾದ ಬಾಣದಂತಿರುವ ಮನಸ್ಸನ್ನು ಶ್ರೀಹರಿಯಲ್ಲಿ ಸಂಬಂಧಪಡಿಸು. ಆ ಮನಸ್ಸನ್ನು ಎಲ್ಲಾ ಪದಾರ್ಥಗಳಿಂದ ನಿಯಮಿಸಿ ತದೇಕಚಿತ್ತನಾಗಿ ಲಕ್ಷ್ಯನಾದ ಅಕ್ಷರನಾಮಕನಾದ ಶ್ರೀ ಹರಿಯನ್ನು ಹೇ ಸೌಮ್ಯನೇ ತಿಳಿ.

**ಮಂ ॥ ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ 5 ॥**

ಖಂಡಾರ್ಥ : ಕಿಂ ಧನುರಾದೀತ್ಯತೋ ವಿವಿಚ್ಯ ದರ್ಶಯತಿ – ಪ್ರಣವೋ ಧನುರಿತಿ ॥ ಆತ್ಮಾ ಚೇತಃ ಶರಃ । ತದಕ್ಷರಾಖ್ಯಂ ಬ್ರಹ್ಮೇತ್ಯರ್ಥಃ ವೇದ್ಧವ್ಯಂ ಬೋದ್ಧವ್ಯಮಿತ್ಯರ್ಥಃ । ಶರವದಿತಿ ॥ ಶರೋ ಯಥಾ ವೇದ್ಧವ್ಯಮನುಪ್ರವಿಶತಿ ತಥಾ ಜ್ಞಾನ್ಯಪಿ ತನ್ಮಯಃ ತತ್ಪ್ರವಿಷ್ಟೋ ಭವತೀತ್ಯರ್ಥಃ ॥

ಇಲ್ಲಿ ಪ್ರಣವೇ ಧನುಸ್ಸು, ಮನಸ್ಸೇ ಬಾಣವು ಆ ಅಕ್ಷರನಾಮಕನಾದ, ತಿಳಿಯಲು ಯೋಗ್ಯನಾದ ಶ್ರೀಹರಿಯೇ ಗುರಿಯು. ಬಾಣವು ಹೇಗೆ ಲಕ್ಷ್ಯವಾದ ವಸ್ತುವನ್ನು ಪ್ರವೇಶಿಸುತ್ತದೆಯೋ ಅದೇ ರೀತಿಯಲ್ಲಿ ಜ್ಞಾನಿಯು ತನ್ಮಯನಾಗಿ ಶ್ರೀಹರಿಯಲ್ಲಿ ಮನಸ್ಸಿನಿಂದ ಪ್ರವೇಶವನ್ನು ಹೊಂದುತ್ತಾನೆ.

**ಮಂ ॥ ಯಸ್ಮಿನ್ ದ್ಯೌಃ ಪೃಥಿವೀಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥಾಽಮೃತಸ್ಯೈಷ ಸೇತುಃ ॥ 6 ॥**

ಖಂಡಾರ್ಥ : ಯಥಾಕ್ಷರಂ ಪ್ರಾಧಾನ್ಯೇನ ಜ್ಞೇಯಂ ತಥಾಽನ್ಯದಪ್ಯಸ್ತಿ ಕಿಂ ತಾದೃಶಮಿತ್ಯತ ತನ್ಮಹಿಮೋಕ್ತಿಪೂರ್ವಕಂ ನೇತ್ಯಾಹ – ಯಸ್ಮಿನ್ ದ್ಯೌಃ ಇತ್ಯಾದಿನಾ ॥ ಯಸ್ಮಿನ್ ದ್ಯೌರೋತಾ ಪೃಥಿವೀ ಚೋತಾ ಅಂತರಿಕ್ಷಂ ಚೋತ ಸರ್ವೈಃ ಪ್ರಾಣೈಶ್ಚಕ್ಷುರಾದೀಂದ್ರಿಯೈಸ್ಸಹ ಮನಶ್ಚ ಯಸ್ಮಿನ್ನೋತಂ, "ವೇಞ ತಂತುಸಂತಾನೇ" ಪಟೇ ತಂತವಃ ಇವ ಸಂಶ್ಲಿಷ್ಟತಯಾ ಯಮಾಶ್ರಿತ್ಯ ವರ್ತತೇ ದ್ಯೌರಾದಿಕಂ ತಂ ಸರ್ವಾಧಾರಮೇವೈಕಂ ಆತ್ಮಾನಂ ಜಾನಥ ಜಾನೀತ, ವ್ಯತ್ಯಯಾತ್ । ಶೌನಕೋಪಲಕ್ಷಿತಾನ್ ಪ್ರತ್ಯುಚ್ಯತೇ ಇತಿ ಬಹುವಚನಮ್ । ಜಾನಥ ಆತ್ಮಾನಮಿತಿ ಪೃಥಕ್ ನಿರ್ದೇಶಃ ಸರ್ವ ವೈಲಕ್ಷಣ್ಯ ಜ್ಞಾಪನಾರ್ಥಃ । ತದಾಹ ಸೂತ್ರೇ "ದ್ಯುಭ್ವಾದ್ಯಾಯತನಂ ಸ್ವಶಬ್ದಾತ್" ಇತಿ । ಏತೇನಽಽಆಧೇಯಜ್ಞಾನಂ ವಿನಾ ತದಾಧಾರತ್ವೇನ ಜ್ಞಾನಾಯೋಗಾತ್, 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಇತಿ ಸೂತ್ರೋಕ್ತದಿಶಾಽಽಧೇಯಕರ್ಮದೇವತಾದಿ ಜಗಜ್ಞಾನಂ ಸರ್ವಾಧಾರತ್ವ ಪ್ರಕಾರಕ ಬ್ರಹ್ಮಜ್ಞಾನೋಪಯೋಗಿ ಸತ್ ಪರವಿದ್ಯಾ ಭವತೀತಿ ಸೂಚಿತಂ ಭವತಿ । ಅತ ಏವ ಪ್ರಾಕ್ ಕರ್ಮದೇವತಾದಿ ಜಗದುಕ್ತಿಃ, ಅತ್ರೈತತ್ಸರ್ವಮರ್ಪಿತಮಿತಿ ಚೋಕ್ತಮ್ । ಅನ್ಯಾಃ ಅನ್ಯ ವಿಷಯಾಃ ವಾಚಃ ವಿಮುಂಚಥ ಪರಿತ್ಯಜತ ಪ್ರಾಧಾನ್ಯೇನೇತಿ ಇತಿ ಭಾವಃ । ತದಾಹ ಸೂತ್ರೇ

"ಹೇಯತ್ವಾವಚನಾಚ್ಚ" ಇತಿ । ಕುತಸ್ತಸ್ಯೈವ ಜ್ಞಾನಮಾಪಾದ್ಯಮಿತ್ಯತ ಆಹ - **ಅಮೃತಸ್ಯೈಷ ಸೇತುರಿತಿ** ॥ ಏಷ ಆತ್ಮಾಽಮೃತಸ್ಯ ಮುಕ್ತವರ್ಗಸ್ಯ ಸೇತುರಾಶ್ರಯಃ ॥

ಅಕ್ಷರನಾಮಕನಾದ ಶ್ರೀಹರಿಯು ಪ್ರಧಾನವಾಗಿ ತಿಳಿಯುವಂತೆ ಬೇರೆ ಪದಾರ್ಥಗಳಿಗೆ ಪ್ರಾಧಾನ್ಯತೆಯು ಇದೆಯೋ ಎಂದು ಶಂಕಿಸಿದರೆ ಆ ಶ್ರೀಹರಿಯ ಮಹಿಮೆಯನ್ನು ನಿರೂಪಿಸಿ ಬೇರೆ ಪದಾರ್ಥಗಳಿಗೆ ಪ್ರಾಧಾನ್ಯತೆಯು ಇಲ್ಲವೆಂದು ತಿಳಿಸುತ್ತಾರೆ. ಯಾವ ಶ್ರೀಹರಿಯಲ್ಲಿ, ಸ್ವರ್ಗಲೋಕವು, ಭೂಲೋಕವು, ಅಂತರಿಕ್ಷಲೋಕಗಳು, ಬಟ್ಟೆಯಲ್ಲಿ ಎಳೆಗಳು ಓತಪ್ರೋತವಾದಂತೆ ಶ್ರೀಹರಿಯಲ್ಲಿ ಆಶ್ರಿತವಾಗಿ ಇರುತ್ತದೆ. ಅಂತಹ ಸ್ವರ್ಗಾದಿಗಳಿಗೆ ಆಶ್ರಯನಾದ ಶ್ರೀಹರಿಯನ್ನು ತಿಳಿಯಿರಿ. ಇಲ್ಲಿ ಬಹುವಚನವು ಕೇವಲ ಶೌನಕರೇ ಶ್ರೋತೃಗಳಲ್ಲ, ಬೇರೆ ಋಷಿಗಳು ಅಲ್ಲಿ ಕೇಳುತ್ತಿದ್ದಾರೆ, ಎಂದು ಸೂಚಿಸುತ್ತದೆ. 'ಆತ್ಮಾನಂ ಜಾನಥ' ಎಂದು ಭಿನ್ನ ಭಿನ್ನವಾಗಿ ನಿರ್ದೇಶಿಸಿರುವುದರಿಂದ ಆ ಶ್ರೀಹರಿಯು ಸರ್ವ ವಿಲಕ್ಷಣನಾಗಿದ್ದಾನೆಂದು ತಿಳಿಯಬೇಕು ಇದು "ದ್ಯುಭ್ವಾದ್ಯಾಯತನಂ ಸ್ವಶಬ್ದಾತ್" ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಆಧೇಯದ ಜ್ಞಾನವಿಲ್ಲದೇ, ಆಧಾರದ ಜ್ಞಾನವಾಗುವುದಿಲ್ಲವಾದ್ದರಿಂದ, "ಅವಸ್ಥಿತೇರಿತಿ ಕಾಶಕೃತ್ಸ್ನಃ"ವೆಂಬ ಸೂತ್ರದಲ್ಲಿ ನಿರೂಪಿಸಿದಂತೆ, ಆಧೇಯವಾದ ದೇವತಾದಿಜಗತ್-ಜ್ಞಾನವು ಸರ್ವಾಧಾರನಾದ ಶ್ರೀಹರಿಯು ಜ್ಞಾನಕ್ಕೆ ಉಪಯೋಗಿಯಾಗಿ ಋಗಾದಿಗಳೆಲ್ಲವೂ ಈ ರೀತಿ ಪರವಿದ್ಯೆಯಾಗುತ್ತದೆ ಎಂದು ಸೂಚಿತವಾಗುತ್ತದೆ. ಆದ್ದರಿಂದಲೇ ಹಿಂದೆ ಹೇಳಿದ್ದಾರೆ, ಬೇರೆ ವಿಷಯಕವಾದ ವಾಕ್ಯಗಳನ್ನು ಪರಿತ್ಯಾಗ ಮಾಡಿರಿ. 'ಹೇಯತ್ವಾವಚನಾಚ್ಚ' ಎಂದು ಸೂತ್ರದಲ್ಲಿ ಈ ವಿಷಯವು ಹೇಳಲ್ಪಟ್ಟಿದೆ. ಈ ಶ್ರೀಹರಿಯು ಮುಕ್ತಿವರ್ಗಕ್ಕೆ ಆಶ್ರಯನಾಗಿದ್ದಾನೆ.

**ಮಂ ॥ ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ।**
**ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ॥ 7 ॥**

**ಖಂಡಾರ್ಥ : ಯತ್ರ ದೇಹಸ್ಥೇ ಹರೌ ರಥನಾಭೌ ರಥಚಕ್ರೇ ಅರಾಃ ಇವ ನಾಡ್ಯಃ ಸಂಹತಾಸ್ಸಂಬದ್ಧಾಃ ಸ ಏಷ ಆತ್ಮಾ ಬಹುಧಾ ವಿಶ್ವಾದಿರೂಪೇಣ ಜಾಯಮಾನಃ ಪ್ರಾದುರ್ಭವನ್ ಅಂತಃ ಶರೀರಾಂತಶ್ಚರತೇ ಸಂಚರತಿ ॥**

ರಥದನಾಭಿಗಳಿಗೆ ಅರಗಳಂತೆ ಈ ದೇಹದಲ್ಲಿರುವ ಶ್ರೀಹರಿಯಲ್ಲಿ ನಾಡಿಗಳು ಸಂಬದ್ಧವಾಗಿದೆ. ಆ ಶ್ರೀಹರಿಯು ಬಹುಪ್ರಕಾರವಾಗಿ ವಿಶ್ವಾದಿರೂಪಗಳಿಂದ ಪ್ರಾದುರ್ಭಾವನಾಗಿ ಈ ಶರೀರದಲ್ಲಿಯೂ ಸಂಚರಿಸುತ್ತಾನೆ.

**ಮಂ ॥ ಓಮಿತ್ಯೇವ ಧ್ಯಾಯತ ಆತ್ಮಾನಂ ಸ್ವಸ್ತಿ ವಃ ಪರಾಯ ತಮಸಃ ಪರಸ್ತಾತ್ ॥ 8 ॥**

**ಖಂಡಾರ್ಥ : ಜಾನಥೇತ್ಯುಕ್ತಜ್ಞಾನೋಪಾಯಮಾಹ – ಓಮಿತ್ಯೇವೇತಿ ॥ ಆತ್ಮಾನಮೋಮ್ ಅಶೇಷಗುಣಪೂರ್ಣಂ । ಮುಖ್ಯವೃತ್ತ್ಯಾ ಋಗಾದಿಶಾಸ್ತ್ರವೇದ್ಯಮಿತ್ಯೇವ ಧ್ಯಾಯತ । ಕಿಮರ್ಥಂ? ತಮಸಃ ಪರಸ್ತಾತ್ ಪರಾಯ, ಜ್ಞಾನೋಪಲಕ್ಷಣಂ, ಜಡಪ್ರಕೃತಿಪರಶ್ರೀತತ್ವಾತ್ಪರಭೂತಪರಮಾತ್ಮಜ್ಞಾನಾಯ । ಏವಂ ಧ್ಯಾನೇ ಸತಿ ತಜ್ಞಾನಂ ಭವತಿ । ತೇನ ಚ ಪರಾತ್ಪರಜ್ಞಾನೇನ ವೋ ಯುಷ್ಮಾಕಂ ಸ್ವಸ್ತಿ ಮಂಗಲಂ ಭವತೀತ್ಯರ್ಥಃ ॥**

ಜಾನಥ ಎಂದು ಹೇಳಿದ್ದರು ಅದರ ಜ್ಞಾನಕ್ಕೆ ಉಪಾಯವನ್ನು ಹೇಳುತ್ತಾರೆ. ಶ್ರೀಹರಿಯನ್ನು ನಿಖಿಲಗುಣಪೂರ್ಣನೆಂದು. ಋಗಾದಿ ಎಲ್ಲಾ ಶಾಸ್ತ್ರಗಳಿಂದ ಮುಖ್ಯವೃತ್ತಿಯಿಂದ ತಿಳಿಯಲ್ಪಡುವವನೆಂದು, ಜಡಪ್ರಕೃತಿಗಿಂತ ಉತ್ತಮಳಾದ ರಮಾದೇವಿಯರಿಗಿಂತ ಉತ್ತಮನಾದ ಶ್ರೀಹರಿಯ ಜ್ಞಾನಕ್ಕೆ ಈ ರೀತಿಯಲ್ಲಿ ಧ್ಯಾನಮಾಡಿದರೆ ಶ್ರೀಹರಿಯ ಜ್ಞಾನವಾಗುತ್ತದೆ. ಆಗ ನಿನಗೆ ಆ ಶ್ರೀಹರಿಯ ಜ್ಞಾನದಿಂದ ಪರಮ ಮಂಗಳವಾಗುತ್ತದೆ.

**ಮಂ ॥ ಯಃ ಸರ್ವಜ್ಞಃ ಸರ್ವವಿದ್ಯಸ್ಯೈಷ ಮಹಿಮಾ ಭುವಿ । ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಪ್ರತಿಷ್ಠಿತಃ ॥ 9 ॥**

**ಖಂಡಾರ್ಥ : ಆತ್ಮಾನಂ ವಿಶಿನಷ್ಟಿ – ಯಸ್ಸರ್ವಜ್ಞಃ ಸರ್ವವಿದಿತಿ ॥ ಏಷ ಸಾರ್ವಜ್ಞಾದಿರೂಪೋ ಯಸ್ಯ ಮಹಿಮಾ ಭುವಿ ಭೂಮ್ಯಾದೌ ಪ್ರಕಟಿತಃ ತಮಾತ್ಮಾನಮಿತ್ಯರ್ಥಃ । ಕುತ್ರತ್ಯ ಆತ್ಮಾ ಧ್ಯೇಯಃ ಇತ್ಯತ ಆಹ – ದಿವ್ಯ ಇತಿ ॥ ಬ್ರಹ್ಮಪುರೇ ದೇಹೆ ದಿವಿ ಭವೇ ದಿವ್ಯೇ, ವ್ಯೋಮ್ನೋ ದ್ಯುಸಂಬಂಧಿತ್ವಾತ್ ದಿವ್ಯ ಇತ್ಯುಕ್ತಿಃ, ವ್ಯೋಮ್ನೀ ದೇಹಸ್ಥ ಆಕಾಶೇ ಏಷ ಆತ್ಮಾ ಪ್ರತಿಷ್ಠಿತಃ ॥**

ಆ ಶ್ರೀಹರಿಯು ಸರ್ವಜ್ಞನು, ಸರ್ವವನ್ನು ಹೊಂದಿದವನು, ಆತನ ಮಹಿಮೆಯು ಈ ಭೂಲೋಕದಲ್ಲಿ ಪ್ರಕಟವಾಗಿದೆ. ದೇಹದಲ್ಲಿರುವ ದಿವ್ಯವಾದ ಆಕಾಶಮಂಡಲದಲ್ಲಿ ಶ್ರೀಹರಿಯು ಪ್ರತಿಷ್ಠಿತನಾಗಿದ್ದಾನೆ.

**ಮಂ ॥ ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ । ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪಮಮೃತಂ ಯದ್ವಿಭಾತಿ ॥ 10 ॥**

**ಖಂಡಾರ್ಥ : ಶರೀರಾಕಾಶೇಽಪಿ ಹೃದಯರೂಪಸ್ಥಲವಿಶೇಷಮಾಹ -- ಮನೋಮಯ ಇತಿ ॥ ಜ್ಞಾನಪ್ರಚುರಃ ಪೂರ್ಣಜ್ಞಾನ ಇತ್ಯರ್ಥಃ । ಪ್ರಾಣಶರೀರನೇತಾ ಪ್ರಾಣಾನಾಂ ಪಂಚವಾಯೂನಾಂ ಸರ್ವೇಂದ್ರಿಯಾಣಾಂಚ ಶರೀರಸ್ಯಚ ನೇತಾ ಪ್ರೇರಕಃ । ಏತೇನ ದೇಹೇ ತಸ್ಯ ಸ್ಥಿತೌ ಕೃತ್ಯಂ ದರ್ಶಿತಮ್ । ಪ್ರಾಣಾದಿನೇತೃತ್ವಂ ಚಾಜ್ಞಸ್ಯ ನ ಯುಕ್ತಮಿತ್ಯತೋ ಮನೋಮಯ ಇತ್ಯುಕ್ತಿಃ । ಅನ್ನೇ ಅನ್ನವಿಕಾರೇ ದೇಹೇ, ಕಾರ್ಯಕಾರಣಯೋರ-ಭೇದೋಪಚಾರಾತ್ । ಹೃದಯಂ ಸನ್ನಿಧಾಯ ಅಧಿಷ್ಠಾಯ ಪ್ರತಿಷ್ಠಿತಃ ಸ್ಥಿತಃ । ತಸ್ಯ ದರ್ಶನಾಯೋಗ್ಯತ್ವೇ ಧ್ಯಾನಂ ವ್ಯರ್ಥಮಿತ್ಯತ ಆಹ – ತದ್ವಿಜ್ಞಾನೇನೇತಿ ॥ ಯದಾನಂದರೂಪಮಮೃತಂ ವಿಭಾತಿ । "ಅತೋಽನಂತೇನ ತಥಾಹಿ ಲಿಂಗಮ್" ಇತಿ ಸೂತ್ರೋಕ್ತದಿಶಾಽವ್ಯಕ್ತೈಕಸ್ವಭಾವಮಪ್ಯಚಿಂತ್ಯಾದ್ಭುತ ಶಕ್ತ್ಯಾ ವಿಶೇಷೇಣ ಭಾತಿ ಆವಿರ್ಭವತಿ । ತದ್ರೂಪಂ ಧೀರಾಃ ಪಟುತರಶ್ರವಣಮನನನಿಧಿಧ್ಯಾಸನವಾಸನಾವಸಿತಾಂತಃಕರಣಜನ್ಯೇನ ವಿಜ್ಞಾನೇನ ಪರಿಪಶ್ಯಂತಿ ವಿಷಯೀಕುರ್ವಂತೀತ್ಯರ್ಥಃ । ತಥಾಚ ಸೂತ್ರಂ 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' ಇತಿ ॥**

ಜ್ಞಾನಪೂರ್ಣನಾದ, ಪಂಚವಾಯುಗಳಿಗೆ, ಸರ್ವೇಂದ್ರಿಯಗಳಿಗೆ, ಶರೀರಕ್ಕೆ ಪ್ರೇರಕನಾದ, ಶ್ರೀಹರಿಯು ಅನ್ನವಿಕಾರವಾದ ದೇಹದಲ್ಲಿ ಸನ್ನಿಹಿತನಾಗಿ ಪ್ರತಿಷ್ಠಿತನಾಗಿದ್ದಾನೆ. ಅವನು ದರ್ಶನಕ್ಕೆ ಅಯೋಗ್ಯನಾದರೆ ಧ್ಯಾನವು ವ್ಯರ್ಥವಾಗುವುದೆಂದು ಹೇಳುತ್ತಾರೆ. ಯಾರು ಆನಂದರೂಪನಾಗಿ, ಅಮೃತರೂಪನಾಗಿ ಶೋಭಿಸುತ್ತಾನೆ. "ಅತೋಽನಂತೇನ ತಥಾಹಿ ಲಿಂಗಮ್" ಎಂಬ ಸೂತ್ರದಲ್ಲಿ ತಿಳಿಸಿದಂತೆ ಅವ್ಯಕ್ತಸ್ವರೂಪನಾದರೂ ಶ್ರೀಹರಿ ತನ್ನ

ಅಚಿಂತ್ಯಾದ್ಭುತಮಹಿಮೆಯಿಂದ ವ್ಯಕ್ತನಾಗುತ್ತಾನೆ. ಈ ಶ್ರೀಹರಿಯು ರೂಪವನ್ನು ಶ್ರವಣ, ಮನನ ನಿಧಿಧ್ಯಾಸನದಿಂದ ಕೂಡಿದ ಅಂತಃಕರಣಜನ್ಯವಾದ ವಿಜ್ಞಾನದಿಂದ ವಿಷಯೀಕರಿಸುತ್ತಾರೆ. 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' ಎಂಬ ಸೂತ್ರದಲ್ಲಿ ಈ ವಿಷಯವು ನಿರೂಪಿತವಾಗಿದೆ.

**ಮಂ ॥ ಭಿಧ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ 11 ॥**

**ಖಂಡಾರ್ಥ : ತದ್ದೃಷ್ಟೇಃ ಫಲಮಾಹ – ಭಿಧ್ಯತೇ ಇತಿ ॥ ಪರಾ ಅಪಿ ಬ್ರಹ್ಮಾದಯೋಽವರಾಃ ಯಸ್ಮಾತ್ಸ ಪರಾವರಃ ತಸ್ಮಿನ್ ಪರಾವರೇ ತಸ್ಮಿನ್ ಸರ್ವೋತ್ತಮೇ, ತಸ್ಮಿನ್ನಾನಂದರೂಪೇ ಹರೌ ದೃಷ್ಟೇಸತಿ ಹೃದಯಗ್ರಂಥಿಃ ಅವಿದ್ಯಾತನ್ಮೂಲರಾಗದ್ವೇಷದುಃಖಾದಿರೂಪೋ ಬಂಧೋ ಭಿದ್ಯತೇ ಅಪಯತಿ । ಅಜ್ಞಾನಮೂಲಾಸ್ಸಂದೇಹವಿಪರ್ಯಯಾಶ್ಚಾಪಗಚ್ಛಂತಿ । ಅಸ್ಯಾಪರೋಕ್ಷಜ್ಞಾನಿನಃ ಕರ್ಮಾಣಿ ಸಂಚಿತಾಗಾಮಿನ್ಯಪ್ರಾರಬ್ಧಾನಿ ಕರ್ಮಾಣಿ ಕ್ಷೀಯಂತೇ । ಸಂಚಿತಾನಾಂ ಕ್ಷಯೋ ನಾಶಃ । ಆಗಾಮಿನಾಮಶ್ಲೇಷಃ । ತಥಾಚ ಸೂತ್ರಂ 'ತದಧಿಗಮೇ ಉತ್ತರಪೂರ್ವಾಘಯೋರಶ್ಲೇಷವಿನಾಶೌ' ಇತಿ ॥**

ಇಂತಹ ಶ್ರೀಹರಿಯ ದರ್ಶನವುಳ್ಳವನಿಗೆ ಫಲವನ್ನು ಹೇಳುತ್ತಾರೆ. ಬ್ರಹ್ಮಾದಿಗಳೂ ಸಹ ಯಾರಿಂದ ಅವರರಾಗಿದ್ದಾರೋ ಅಂತಹ, ಸರ್ವೋತ್ತಮನಾದ ಆನಂದರೂಪನಾದ ಶ್ರೀಹರಿಯ ದರ್ಶನವಾಗಲು ಅವಿದ್ಯಾ ತನ್ಮೂಲವಾದ ದುಃಖ, ರಾಗ, ದ್ವೇಷಾದಿ ರೂಪವಾದ ಬಂಧವು ನಿವೃತ್ತವಾಗುತ್ತದೆ. ಅಜ್ಞಾನಮೂಲವಾದ ಸಂದೇಹ, ವಿಪರೀತ ಜ್ಞಾನಗಳು ನಿವೃತ್ತವಾಗುತ್ತವೆ. ಇಂತಹ ಅಪರೋಕ್ಷಜ್ಞಾನಿಗಳ ಸಂಚಿತಾಗಾಮಿಗಳಾದ, ಅಪ್ರಾರಬ್ಧವಾದ ಕರ್ಮಗಳು ನಾಶವಾಗುತ್ತವೆ. ಸಂಚಿತಕರ್ಮಗಳ ಕ್ಷಯವೇ ನಾಶವು, ಆಗಾಮಿ ಕರ್ಮಗಳ ಸಂಬಂಧವಾಗದೇ ಇರುವುದು ಅಶ್ಲೇಷ. ಇವುಗಳು ಆಗುತ್ತವೆ. 'ತದಧಿಗಮೇ ಉತ್ತರಪೂರ್ವಾಘಯೋರಶ್ಲೇಷವಿನಾಶೌ' ಎಂಬ ಸೂತ್ರದಲ್ಲಿ ನಿರೂಪಿತವಾಗಿದೆ.

**ಮಂ ॥ ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥ 12 ॥**

ಖಂಡಾರ್ಥ : ಏವಂ ದೇಹೇ ಭಗವದುಪಾಸನಾಸ್ಥಲಮುಕ್ತ್ವಾ ಬ್ರಹ್ಮಾಂಡಮಧ್ಯಸ್ಥ ಸೂರ್ಯರೂಪಂ ಚೋಪಾಸ್ತಿಸ್ಥಲಮಾಹ – ಹಿರಣ್ಮಯ ಇತಿ ॥ ಹಿರಣ್ಮಯೇ ಸುವರ್ಣಾತ್ಮಕೇ ಪರೇ ಉತ್ತಮೇ ಕೋಶೇ ಬ್ರಹ್ಮಾಂಡೇ ವಿರಜಂ ವಿರಜಸ್ಕಂ ರಜೋಗುಣೋಪಲಕ್ಷಿತಸತ್ವಾದಿಗುಣಹೀನಂ ನಿಷ್ಕಲಂ ಷೋಡಶಕಲಾರಹಿತಂ ಅತ ಏವ ಶುಭ್ರಂ ಶುದ್ಧಂ ಜ್ಯೋತಿಷಾಂ ತೇಜೋರೂಪಾಣಾಂ ಜ್ಯೋತಿಃ ಪ್ರಕಾಶಕತ್ವಪ್ರದಂ, ಸರ್ವಜ್ಯೋತಿರಪೇಕ್ಷಯಾಽತಿಶಯಿತಮಹಾಪ್ರಕಾಶರೂಪಮಿತಿ ವಾಽರ್ಥಃ "ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್" ಇತ್ಯಾದಿವತ್, ಆದಿತ್ಯಸ್ಥಂ ಬ್ರಹ್ಮ ಆತ್ಮವಿದೋ ವಿದುಃ ಜಾನಂತಿ । ಅತಸ್ತತ್ರಾಽಽತ್ಮಾನಂ ಧ್ಯಾಯೀತೇತಿ ಭಾವಃ ॥

ಹೀಗೆ ದೇಹದಲ್ಲಿ ಶ್ರೀಹರಿಯ ಉಪಾಸನೆಯ ಫಲವನ್ನು ಹೇಳಿ ಬ್ರಹ್ಮಾಂಡದ ಮಧ್ಯದಲ್ಲಿರುವ ಸೂರ್ಯರೂಪದ ಉಪಾಸನೆಯ ಸ್ಥಳವನ್ನು ಹೇಳುತ್ತಾರೆ. ಸುವರ್ಣಮಯವಾದ ಉತ್ತಮವಾದ ಬ್ರಹ್ಮಾಂಡದಲ್ಲಿ ಸತ್ವಾದಿಗುಣರಹಿತನಾದ, ಹದಿನಾರು ಕಲೆಗಳಿಂದ ರಹಿತನಾದ ಆದ್ದರಿಂದಲೇ ಶುದ್ಧನಾದ, ತೇಜೋಮಯ ಪದಾರ್ಥಗಳಿಗೆ ಪ್ರಕಾಶವನ್ನು ಕೊಡುವ, ಅಥವಾ ತೇಜೋಮಯವಾದ ಎಲ್ಲಾ ಪದಾರ್ಥಗಳಿಂದಲೂ ಹೆಚ್ಚು ಪ್ರಕಾಶಮಯನಾದ, ಸೂರ್ಯಸ್ಥನಾದ ಬ್ರಹ್ಮನನ್ನು ಆತ್ಮಜ್ಞಾನಿಗಳು ತಿಳಿಯುತ್ತಾರೆ. ಆದ್ದರಿಂದ ಅಲ್ಲಿ ಆತ್ಮನನ್ನು ಧ್ಯಾನಿಸಬೇಕು.

**ಮಂ ॥ ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ 13 ॥**

ಖಂಡಾರ್ಥ : ಕಥಂ ಸರ್ವಜ್ಯೋತಿರಪೇಕ್ಷಯಾಽತಿಶಯಿತಮಹಾಪ್ರಕಾಶರೂಪತ್ವಂ ಹರೇರಿತ್ಯತ ಆಹ – ನ ತತ್ರೇತಿ ॥ ತತ್ರ ಜ್ಯೋತಿಷಾಂ ಜ್ಯೋತಿರೂಪೇ ಹರೌ, ವಿಷಯಸಪ್ತಮೀ । ಚಂದ್ರತಾರಕಮಿತಿ ದ್ವಂದ್ವೈಕದ್ಭಾವಃ । ತತ್ರ ಭಗವದ್ವಿಷಯೇ ಸೂರ್ಯಚಂದ್ರಾದಿಕಂ ನ ಭಾತಿ । ತದಪೇಕ್ಷಯಾಽಲ್ಪಪ್ರಕಾಶರೂಪತ್ವಾತ್ ಸೂರ್ಯಾದೇಃ ಮಹಾಪ್ರಕಾಶಂ ಭಗವಂತಂ ದೀಪಃ ಸೌರಾಲೋಕಮಿವ ನ ಭಾಸಯಂತಿ ಸೂರ್ಯಾದಯಸ್ತಮಿತಿ ಭಾವಃ । ತಥಾಚ ಗೀತಾ 'ನ ತದ್ಭಾಸಯತೇ ಸೂರ್ಯ' ಇತ್ಯಾದಿ । ನ ಕೇವಲಂ ಸೂರ್ಯಾದೇಸ್ತದಪ್ರಕಾಶಕತ್ವಮ್ । ಕಿಂತು ಯತ್ಪ್ರಕಾಶಮಾನತ್ವಂ ಸ್ವಸ್ಯಾಸ್ತಿ ತದಪಿ

ಜ್ಯೋತೀರೂಪ ಭಗವದಧೀನಮಿತ್ಯಾಹ – ತಮೇವೇತಿ ॥ ಭಾಂತಂ ಪ್ರಕಾಶಮಾನಂ ತಂ ಭಗವಂತಮನು, ಅನುರ್ಲಕ್ಷಣೇ, ತದಧೀನಂ ಸತ್ಪೂರ್ವಮಂತ್ರೇ ಪ್ರಕೃತಂ ಸೂರ್ಯಚಂದ್ರಾದಿ ಭಾತಿ ಪ್ರಕಾಶತೇ । ವಿಶ್ವಪ್ರಕಾಶಕತ್ವಮಪಿ ಸೂರ್ಯಾದೇಃ ತತ್ತೇಜೋಧಿಷ್ಠಾನತ್ವೇನೈವೇತ್ಯಾಹ – ತಸ್ಯೇತಿ ॥ ತಸ್ಯ ಭಾಸಾ ಭಗವದ್ಭಾಸಾ ಸರ್ವಂ ಜಗದ್ಭಾತಿ ಪ್ರಕಾಶತೇ । ಸೂರ್ಯಾದಿಪ್ರಕಾಶದ್ವಾರೇತಿ ಭಾವಃ । ತಥಾಚ ಗೀತಾ –

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ಇತಿ ॥
ಮಾಮಕಂ ಮದಧೀನಂ ಮದೀಯಂಚೇತ್ಯರ್ಥಃ ॥

ಶ್ರೀಹರಿಯು ಎಲ್ಲಾ ಜ್ಯೋತಿರ್ಮಯ ಪದಾರ್ಥಗಳಿಗಿಂತ ಅತಿಶಯಿತ ಜ್ಯೋತಿರ್ಮಯನು ಎಂದು ನಿರೂಪಿಸುತ್ತಾರೆ. ಜ್ಯೋತಿಸ್ವರೂಪನಾದ ಶ್ರೀಹರಿಯಲ್ಲಿ ಸೂರ್ಯ – ಚಂದ್ರಾದಿಗಳು ಪ್ರಕಾಶಿಸುವುದಿಲ್ಲ. ಸೂರ್ಯಚಂದ್ರಾದಿಗಳಿಗಿಂತಲೂ ಹೆಚ್ಚು ಪ್ರಕಾಶಮಯನಾದ್ಧರಿಂದ ಭಗವಂತನಲ್ಲಿ, ಸೂರ್ಯಮಂಡಲದಲ್ಲಿ ದೀಪದಂತೆ ಸೂರ್ಯಾದಿಗಳು ಪ್ರಕಾಶಿಸುವುದಿಲ್ಲ. ಇದನ್ನು "ನ ತದ್ಭಾಸಯತೆ" ಸೂರ್ಯ ಎಂಬ ಗೀತಾವಚನದಲ್ಲಿ ನಿರೂಪಿಸಲಾಗಿದೆ. ಪ್ರಕಾಶಮಯವಾದವುಗಳಿಗೆ ಇರುವ ಪ್ರಕಾಶವು ಭಗವದಧೀನವಾಗಿದೆಯೆಂದು ತಿಳಿಸುತ್ತಾರೆ. ಪ್ರಕಾಶಮಾನವಾದ ಶ್ರೀಹರಿಯನ್ನು ಅನುಸರಿಸಿ ಎಲ್ಲಾ ಸೂರ್ಯಚಂದ್ರಾದಿಗಳು ಪ್ರಕಾಶಿಸುತ್ತಾರೆ. ಸೂರ್ಯನಿಗಿರುವ ಜಗತ್ಪ್ರಕಾಶಕತ್ವವೂ ಸಹ ಶ್ರೀಹರಿಗೆ ಅಧೀನವಾಗಿದೆ ಎಂದು ತಿಳಿಸುತ್ತಾರೆ. ಭಗವಂತನ ಪ್ರಕಾಶದಿಂದ ಸಮಸ್ತ ಜಗತ್ತು ಸೂರ್ಯಾದಿಗಳ ದ್ವಾರಾ ಪ್ರಕಾಶಿಸುತ್ತದೆ. ಹೀಗೆಂದು ಗೀತೆಯ ವಚನವಿದೆ.

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।
ಇಲ್ಲಿರುವ ಮಾಮಕ ಶಬ್ದಕ್ಕೆ ನನ್ನಾಧೀನ ಮತ್ತು ನನ್ನದು ಎಂದರ್ಥ.

**ಮಂ ॥ ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣ–ತಶ್ಚೋತ್ತರೇಣ । ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥ 14 ॥**

ಖಂಡಾರ್ಥ : ಹೃದಯಂ ಸನ್ನಿಧಾಯ ಪ್ರತಿಷ್ಠಿತ ಇತಿ, ಹೃದಯೇ ಜೋತಿಷಾಂ ಜ್ಯೋತಿರಿತಿ ಸೂರ್ಯೇಚ ಧ್ಯಾನಾರ್ಥಂ ಸ್ಥಿತ್ಯುಕ್ತ್ಯಾ ಪ್ರಾಪ್ತ ಪರಿಚ್ಛಿನ್ನತ್ವಶಂಕಾಂ ನಿರಾಹ – ಬ್ರಹ್ಮೈವೇದಮಿತಿ ॥ ಇದಮಮೃತಂ ಬ್ರಹ್ಮೈವ । ಪುರಸ್ತಾತ್ಪುರೋದೇಶೆ ಪ್ರಸೃತಂ ವ್ಯಾಪ್ತಂ ಬ್ರಹ್ಮ, ಪಶ್ಚಾತ್ಪಶ್ಚಿಮದೇಶೇ ಬ್ರಹ್ಮ, ದಕ್ಷಿಣತಶ್ಚೋತ್ತರೇಣ ದಕ್ಷಿಣದೇಶೇ ಉತ್ತರದೇಶೇ ಚ ಪ್ರಸೃತಮಧಶ್ಚೋರ್ಧ್ವಂ ಚಾಧೋದೇಶೋತ್ತರದೇಶಯೋಃ ಪ್ರಸೃತಮಿದಂ ಬ್ರಹ್ಮೈವ । ವಿಶ್ವಂ ಪೂರ್ಣಮಿದಂ ಬ್ರಹ್ಮೈವ । ವರಿಷ್ಠಂ ಸರ್ವೋತ್ತಮಮ್ । ಏವಂ ಸರ್ವದೇಶೇಷು ವ್ಯಾಪ್ತಸ್ಯಾಪಿ ಹರೇಃ ಹೃದಯಾದ್ಯಲ್ಪದೇಶೇಷ್ವವಸ್ಥಾನಂ 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಇತಿ ಸೂತ್ರೋಕ್ತದಿಶಾ ಯುಕ್ತಮಿತಿ ಧ್ಯೇಯಮ್ ॥

ಹೃದಯದಲ್ಲಿ ಸನ್ನಿಹಿತನಾಗಿದ್ದಾನೆ, ಸೂರ್ಯನಲ್ಲಿ ಧ್ಯಾನವನ್ನು ಹೇಳಿದಾಗ ಶ್ರೀಹರಿಗೆ ಅಳತೆಯು ಪ್ರಾಪ್ತವಾಗಿದೆ. ಅದನ್ನು ತಿರಸ್ಕರಿಸುತ್ತಾರೆ– ಈ ಅಮೃತಮಯನಾದವನು ಬ್ರಹ್ಮನೇ, ಮುಂಭಾಗದಲ್ಲಿ ವ್ಯಾಪ್ತನಾದವನು ಬ್ರಹ್ಮನೇ ಹಿಂಭಾಗದಲ್ಲಿರುವವನೂ ಶ್ರೀಹರಿಯೇ. ದಕ್ಷಿಣ ಭಾಗದಲ್ಲಿ, ಉತ್ತರಭಾಗದಲ್ಲಿ, ಮೇಲಿನ ಹಾಗೂ ಕೆಳಗಿನಭಾಗದಲ್ಲಿಯೂ ಈ ಬ್ರಹ್ಮನು ವ್ಯಾಪ್ತನಾಗಿದ್ದಾನೆ. ಸರ್ವೋತ್ತಮನಾಗಿದ್ದಾನೆ. ಈ ರೀತಿಯಲ್ಲಿ ಸರ್ವದೇಶಗಳಲ್ಲಿಯೂ ವ್ಯಾಪ್ತನಾದ ಶ್ರೀಹರಿಯು "ನಿಚಾಯ್ಯತ್ವಾದೇವಂ ವ್ಯೋಮವಚ್ಚ" ಎಂಬ ಸೂತ್ರದಲ್ಲಿ ನಿರೂಪಿತ ರೀತಿಯಲ್ಲಿ ಅಲ್ಪವಾದ ಹೃದಯಾದಿದೇಹಗಳಲ್ಲಿಯೂ ಇದ್ದಾನೆಂಬುದು ಯುಕ್ತವಾಗಿದೆ.

### ಇತಿ ಚತುರ್ಥಃ ಖಂಡಃ

# ಅಥ ಪಂಚಮಃ ಖಂಡಃ

**ಮಂ ॥ ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವ ಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥ 1 ॥**

ಖಂಡಾರ್ಥ : ಸ ಏಷೋಽಂತಶ್ಚರತೇ ಬಹುಧಾ ಜಾಯಮಾನ ಇತ್ಯುಕ್ತಂ ಹರೇರ್ಬಹುಧಾ ಜಾಯಮಾನತ್ವಂ ಜೀವಾಭೇದೇನೇತಿ ಭ್ರಮನಿರಾಸಾಯ ತಯೋರ್ಭೇಧಮಾಹ – ದ್ವಾ ಸುಪರ್ಣೇತಿ ॥ ಸಂಯುಜೌ ಸಂಯುಕ್ತೌ ಸದಾ ವಿಯೋಗರಹಿತೌ ಉಪಕಾರ್ಯೋಪಕರ್ತೃಭಾವೇನ ಸಖಾಯೌ ದ್ವೌ ಸುಪರ್ಣರೂಪೌ ಜೀವೇಶೌ ಸಮಾನಂ ವೃಕ್ಷಂ ದೇಹಾಖ್ಯಮೇಕಮಶ್ವತ್ಥವೃಕ್ಷಂ ಪರಿಷಸ್ವಜಾತೇ ಆಲಿಲಿಂಗತುಃ । ತಯೋಸ್ಸುಪರ್ಣಯೋರ್ಮಧ್ಯೇಽನ್ಯೋ ಜೀವಃ ಪಿಪ್ಪಲಮಶ್ವತ್ಥಫಲರೂಪಂ ದೇಹಜನಿತಂ ಕರ್ಮಫಲಮಸ್ವಾದ್ವೇವ ಸ್ವಾದುವದತ್ತಿ । ಅನ್ಯಃ ಈಶ್ವರಃ ಅನಶ್ನನ್ ಜೀವಾದ್ಯಂ ಕರ್ಮಫಲಮನಶ್ನನ್ನಭಿಚಾಕಶೀತಿ, ಕಾಶೃ ದೀಪ್ತೌ, ಯಜಲುಗಂತಂ, ಪ್ರಕಾಶತೇ । ಸ್ವಸ್ಥಿತ್ಯೈ ನ ತದಪೇಕ್ಷತೇ ಇತಿ ಭಾವಃ । ತದುಕ್ತಮೇಕಾದಶಸ್ಕಂಧೇ 'ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋನಿರನ್ನೋಽಪಿ ಬಲೇನ ಭೂಯಾನ್' ಇತಿ ॥

"ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಂ" ಎಂಬಲ್ಲಿ ಶ್ರೀಹರಿಗೆ ಬಹುರೂಪಗಳಿಂದ ಹುಟ್ಟುವಿಕೆಯು ಜೀವನಿಂದ ಅಭೇಧವಿರುವುದರಿಂದ ಎಂಬ ಭ್ರಮೆಯನ್ನು ನಿರಾಕರಿಸಲಿಕ್ಕೆ ಜೀವಬ್ರಹ್ಮರಿಗೆ ಭೇದವನ್ನು ನಿರೂಪಿಸುತ್ತಾರೆ. ಸದಾ ವಿಯೋಗರಹಿತರಾದ ಉಪಕಾರಿ ಉಪಕರ್ತೃಭಾವದಿಂದ ಸ್ನೇಹಿತರಾದ, ಜೀವ ಈಶರು ದೇಹವೆಂಬ ಒಂದೇ ಅಶ್ವತವೃಕ್ಷವನ್ನು ಆಲಿಂಗಿಸಿಕೊಂಡಿರುತ್ತಾರೆ. ಅವರುಗಳ ಮಧ್ಯದಲ್ಲಿ ಜೀವನು ದೇಹಜನಿತವಾದ ಅಶ್ವತ್ಥಫಲ ರೂಪವಾದ ಕರ್ಮಫಲಗಳನ್ನು, ಅಸ್ವಾದು ಆದುದನ್ನು ಸ್ವಾದುವೆಂದು ಅನುಭವಿಸುತ್ತಾನೆ. ಇವನಿಂದ ಭಿನ್ನನಾದ ಶ್ರೀಹರಿಯು ಜೀವನಿಂದ ಅನುಭವಿಸಲ್ಪಟ್ಟ ಕರ್ಮಫಲಗಳನ್ನು ಸ್ವೀಕರಿಸದೆ ಪ್ರಕಾಶಿಸುತ್ತಾನೆ. ತನ್ನ ಅಳಿವಿಗೆ ಈ ಫಲಗಳ ಅಪೇಕ್ಷೆ ಶ್ರೀಹರಿಗೆ ಇರುವುದಿಲ್ಲ. ಇದನ್ನು

"ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾತ್" ಎಂಬ ಏಕಾದಶ ಸ್ಕಂಧ ಭಾಗವತದಲ್ಲಿ ನಿರೂಪಿಸಲಾಗಿದೆ.

**ಮಂ ॥ ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥ 2 ॥**

ಖಂಡಾರ್ಥ : ಅಸ್ಯ ಬಂಧಮೋಕ್ಷಹೇತೂ ಕ್ರಮೇಣಾಹ – ಸಮಾನ ಇತಿ ॥ ಜುಷ್ಟಮಿತಿ ॥ ಸಮಾನೇ ಏಕಸ್ಮಿನ್ ದೇಹಾಖ್ಯೇ ಪಿಪ್ಪಲವೃಕ್ಷೇ ನಿಮಗ್ನೋ ನಿರೂಢೋ ಮಮತಾದ್ಯಭಿಮಾನವಾನ್ ಪುರುಷೋ ಜೀವೋಽನೀಶಾಯಾ ನ ವಿದ್ಯತೇ ಅನ್ಯಃ ಈಶಃ ಯಸ್ಯಾಃ ಸಾಽನೀಶಾ ಸ್ವತಂತ್ರಾ ಭಗವನ್ಮತಿಃ ತಯಾ ಮುಹ್ಯಮಾನಃ ಶೋಚತಿ, ಭಗವಂತಮಜ್ಞಾತ್ವಾ ಸಾಂಸಾರಿಕ ಕ್ಲೇಶಮನುಭವತಿ । ಜುಷ್ಟಂ, ಜುಷೀ ಪ್ರೀತಿಸೇವನಯೋಃ, ಸರ್ವಸೇವ್ಯಮೀಶಂ ವಿಷ್ಣುಂ ಜೀವಾದನ್ಯಮಿತಿ, 'ತದೇತತ್ಸತ್ಯಂ' ಇತ್ಯಾದಿನೋಕ್ತ-ಪ್ರಕಾರೇಣಾಖಿಲಕರ್ಮಾರಾಧ್ಯತ್ವ ಜಗತ್ಸ್ರಷ್ಟತ್ವಾದಿರೂಪಮಸ್ಯೇಶಸ್ಯ ಮಹಿಮಾನಂ ಚ ಯದಾ ಪಶ್ಯತಿ ಪುರುಷೋಜೀವಸ್ತದಾ ವೀತಶೋಕೋಽಪಗತಕ್ಲೇಶಃ ಮುಕ್ತೋ ಭವತೀ ಇತ್ಯರ್ಥಃ ॥

ಜೀವನಿಗೆ ಕ್ರಮವಾಗಿ ಬಂಧಮೋಕ್ಷದ ಮಾರ್ಗಗಳನ್ನು ತಿಳಿಸುತ್ತಾರೆ. ಒಂದೇ ಅಶ್ವತ್ಥವೆಂಬ ದೇಹದಲ್ಲಿ ಮಮತ್ವಾದಭಿಮಾನವುಳ್ಳಂತಹ ಜೀವನು, ಸ್ವತಂತ್ರನಾದ ಭಗವಂತನಿಂದ ಮೋಹಿತನಾಗಿ ಶ್ರೀಹರಿಯನ್ನು ತಿಳಿಯದೆ ಸಂಸಾರದಲ್ಲಿ ಬಹುದುಃಖಗಳನ್ನು ಅನುಭವಿಸುತ್ತಾನೆ. ಸರ್ವರಿಂದಲೂ ಸೇವಿತನಾದ ಶ್ರೀಹರಿಯನ್ನು ಜೀವನಿಂದ ಭಿನ್ನನಾಗಿದ್ದಾನೆಂದು "ತದೇತತ್ಸತ್ಯಂ" ಮೊದಲಾದ ರೀತಿಯಲ್ಲಿ ನಿರೂಪಿಸಿದ ಪ್ರಕಾರ ಜಗತ್ಪ್ರಸಿದ್ಧ ಸಕಲಕರ್ಮಾಧ್ಯಕ್ಷತ್ವಾದಿರೂಪದಿಂದ ಶ್ರೀಹರಿಯ ಮಹಿಮೆಯನ್ನು ತಿಳಿದು ಅಂತಹ ಶ್ರೀಹರಿಯನ್ನು ನೋಡುತ್ತಾನೆಯೋ ಆವಾಗ ಶೋಕರಹಿತನಾಗಿ, ಮುಕ್ತನಾಗುತ್ತಾನೆ.

**ಮಂ ॥ ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥ 3 ॥**

ಖಂಡಾರ್ಥ : ಪ್ರತಿಬಂಧಕಕರ್ಮಣೋ ಭಾವಾತ್ ಕಥಂ ತದ್ದೃಷ್ಟ್ಯಾ ಮುಕ್ತಿಃ? ಅಶರೀರಸ್ಯ ದೃಷ್ಟಿರ್ವಾ ಕಥಮಿತ್ಯತಃ ಪೂರ್ವಮಂತ್ರಾರ್ಥಮೇವ ವಿಶದಮಾಹ – ಯದಾ ಪಶ್ಯ ಇತಿ ॥ ಪಶ್ಯತೀತಿ ಪಶ್ಯೋದ್ರಷ್ಟಾ ಜೀವೋ ಯದಾ ರುಗ್ಮವರ್ಣಂ ಹೇಮವರ್ಣವಿಗ್ರಹಂ 'ರೂಪೋಪನ್ಯಾಸಾಚ್ಚ' ಇತಿ ಸೂತ್ರಾದ್ ಬ್ರಹ್ಮಯೋನಿಂ ಹಿರಣ್ಯಗರ್ಭಸ್ಯ ಕಾರಣಂ, ಜಗತ್ಕರ್ತಾರಂ ಪಶ್ಯತೇ ಪಶ್ಯತಿ ತದಾಽಸೌ ವಿದ್ವಾನ್ ಜ್ಞಾನೀ ಅನಿಷ್ಟ ಪುಣ್ಯಂ ಪಾಪಂ ಚ ವಿಹಾಯ 'ತದಧಿಗಮೇ ಉತ್ತರಪೂರ್ವಾಘಯೋರಶ್ಲೇಷವಿನಾಶೌ' ಇತಿ ಸೂತ್ರೋಕ್ತೇಃ । ನಿರಂಜನಃ ನಿರ್ಲೇಪಃ 'ಅಂಜನಾಖ್ಯಾವಿದ್ಯಾಹೀನ' ಇತಿ ಸುಧೋಕ್ತೇಃ, ಪರಮಂ ಸಾಮ್ಯಂ ನಿದುಃಖಪೂರ್ಣಾನಂದತ್ವಾದಿಬ್ರಹ್ಮಸಾಮ್ಯಮಾಪ್ನೋಽತಿತ್ಯರ್ಥಃ । "ಪುಂಸ್ತ್ವಾದಿವತ್ತ್ವಸ್ಯೇತಿ" ಸೂತ್ರೋಕ್ತದಿಶಾ ಪ್ರಾಗಪಿ ಸಾಮ್ಯಸತ್ವೇಽಪ್ಯಪ್ರಾಪ್ತಭೋಗಪ್ರಾಪ್ತ್ಯಭಿಪ್ರಾಯೇಣ ಪರಮಮಿತ್ಯುಕ್ತಿಃ । ಅಭಿವ್ಯಕ್ತ್ಯಪಕ್ಷೇಯಾ ವಾ ॥

ಪ್ರತಿಬಂಧಕವಾದ ಕರ್ಮಗಳಿರುವುದರಿಂದ ಶ್ರೀಹರಿಯ ದರ್ಶನಮಾತ್ರದಿಂದ ಮುಕ್ತಿಯು ಹೇಗೆ, ಶರೀರರಹಿತನಾದ ಶ್ರೀಹರಿಯ ದರ್ಶನವಾದರೂ ಹೇಗೆ ಎಂದು ಪ್ರಶ್ನಿಸಿದರೆ ಪೂರ್ವಮಂತ್ರವನ್ನೇ ವಿಶದವಾಗಿ ನಿರೂಪಿಸುತ್ತಾರೆ.

ನೋಡುವ ಜೀವನು, ಯಾವಾಗ ಬಂಗಾರಮಯ ವಿಗ್ರಹನಾದಂತಹ, "ರೂಪೋಪನ್ಯಾಸಾಚ್ಚ" ಎಂದು ಸೂತ್ರವಿದೆ. ಬ್ರಹ್ಮದೇವರಿಗೆ ಕಾರಣನಾದ, ಜಗತ್ತಿಗೆ ಕರ್ತನಾದ ಶ್ರೀಹರಿಯನ್ನು ನೋಡುತ್ತಾನೆಯೋ ಆವಾಗ ಈ ಜ್ಞಾನಿಯು ಅನಿಷ್ಟವಾದ ಪುಣ್ಯವನ್ನು ಹಾಗೂ ಪಾಪವನ್ನು ಪರಿತ್ಯಾಗಮಾಡಿ, ('ತದಧಿಗಮ' ಎಂಬ ಸೂತ್ರವು ಇದಕ್ಕೆ ಪ್ರಮಾಣವಾಗಿದೆ.) ಲೇಪರಹಿತನಾಗಿ, ನಿರ್ದುಃಖ, ಪೂರ್ಣಾನಂದಾದಿ ಸ್ವರೂಪನಾದ ಶ್ರೀಹರಿಯ ಸ್ವಾಮ್ಯವನ್ನು ಹೊಂದುತ್ತಾನೆ. "ಪುಂಸ್ತ್ವಾದಿವತ್ತ್ವಸ್ಯ" ಎಂಬ ಸೂತ್ರದಲ್ಲಿ ನಿರೂಪಿಸಿದಂತೆ ಮೊದಲೆ ಸ್ವಾಮ್ಯವಿದ್ದರೂ ಅಪ್ರಾಪ್ತವಾದ ಭೋಗದ ಅಭಿಪ್ರಾಯದಿಂದ "ಪರಮಂ" ಎಂಬ ಶಬ್ದವು ವೇದದಲ್ಲಿರುತ್ತದೆ ಅಥವಾ ಅಭಿವ್ಯಕ್ತವಾಗುತ್ತದೆಂಬ ಅಭಿಪ್ರಾಯದಿಂದಲೂ ಇರುತ್ತದೆ.

**ಮಂ ॥ ಪ್ರಾಣೋ ಹ್ಯೇಷ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್**
**ಭವತೇ ನಾತಿವಾದೀ । ಆತ್ಮಕ್ರೀಡ ಆತ್ಮರತಿಃ ಕ್ರೀಯಾವಾನೇಷ**
**ಬ್ರಹ್ಮವಿದಾಂ ವರಿಷ್ಠಃ ॥ 4 ॥**

ಖಂಡಾರ್ಥ : ವಿದ್ವಾನಿತಿ ಪ್ರಕೃತಜೀವನ್ಮುಕ್ತಸ್ಯ ಸ್ಥಿತಿಪ್ರಕಾರಮಾಹ – ಪ್ರಾಣೋಹ್ಯೇಷ ಇತಿ॥ ವಿದ್ವಾನತಿವಾದಿ ನ ಭವತೇ ನ ಭವತಿ । ಕುತಃ? ಸರ್ವಭೂತೈಃ ಸರ್ವೇಂದ್ರಿಯಾದಿಭಿಃ ಏಷಃ ಪ್ರಾಣಃ ಏವ ಪ್ರಕೃಷ್ಟಚೇಷ್ಟಕೋ ಹರಿರೇವ ವಿಭಾತಿ ಸ್ವತಂತ್ರೋ ವರ್ತತೆ, ಅಹಂ ತು ಅಸ್ವತಂತ್ರಃ ಇತಿ ವಿಜಾನನ್ ಹಿ ಯತೋ ವರ್ತತೇ ಅತ ಇತಿ ಯೋಜನಾ । ಅತಿವಾದಿ ನ ಚೇತ್ ಕಥಂ ತರ್ಹ್ಯಾಸ್ತಃ ಇತ್ಯತ ಆಹ – ಆತ್ಮಕ್ರೀಡಾ ಇತಿ ॥ ಆತ್ಮನಾ ಭಗವತಾ ಕ್ರೀಡತೆ ಇತಿ ಆತ್ಮಕ್ರೀಡಃ। ಆತ್ಮದರ್ಶನಜಂ ಸುಖಂ ಪ್ರಾಪ್ತಃ ಇತ್ಯಾತ್ಮರತಿಃ । ಭಗವದಾರಾಧನೈಕಕ್ರಿಯಾವಾನ್ । ಬ್ರಹ್ಮವಿದಾಮೇಷ ವರಿಷ್ಠಃ ಶ್ರೇಷ್ಠಃ ॥

ವಿದ್ವಾನ್ ಎಂಬ ಶಬ್ದದ ಪ್ರಸಕ್ತನಾದ ಮುಕ್ತನ ಸ್ಥಿತಿಯನ್ನು ಹೇಳುತ್ತಾರೆ. ಸರ್ವೇಂದ್ರಿಯಗಳಿಂದಲೂ ಸರಿಯಾಗಿ ಚೇಷ್ಟಕನಾದ ಪ್ರಾಣಶಬ್ದವಾಚ್ಯನಾದ ಶ್ರೀಹರಿಯೇ ಸ್ವತಂತ್ರನು, ನಾನು ಅಸ್ವತಂತ್ರನು ಆಗಿದ್ದೇನೆ. ಆದ್ದರಿಂದ ಬಹಳ ಮಾತೇ ಮೊದಲಾದ ಬಾಹ್ಯ ವ್ಯಾಪಾರಗಳು ಇರುವುದಿಲ್ಲ. ಶ್ರೀಹರಿಯಿಂದಲೇ ಕ್ರೀಡಿಸುತ್ತಾ, ಶ್ರೀಹರಿಯ ದರ್ಶನದಿಂದ ಜನ್ಯವಾದ ಸುಖವುಳ್ಳವನಾಗಿ, ಭಗವದಾರಾಧನೆ ಎಂಬ ಒಂದೇ ಕ್ರಿಯಾವುಳ್ಳವನಾಗಿರುತ್ತಾನೆ. ಇವನೇ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನು.

**ಮಂ ॥ ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಕ್ ಜ್ಞಾನೇನ**
**ಬ್ರಹ್ಮಚರ್ಯೇಣ ನಿತ್ಯಂ । ಅಂತಃಶರೀರೇ ಜ್ಯೋತಿರ್ಮಯೋ ಹಿ**
**ಶುಭ್ರೋ ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥ 5 ॥**

ಖಂಡಾರ್ಥ : ಭಗವದಪರೋಕ್ಷಜ್ಞಾನಾಯ ಧ್ಯಾನರೂಪಂ ಸಾಧನಮುಕ್ತಂ ಧ್ಯಾಯತೇ ಆತ್ಮಾನಮಿತ್ಯತ್ರ ತತ್ಸಹಕಾರೀಣ್ಯಾಹ – ಸತ್ಯೇನೇತಿ ॥ ಸತ್ಯೇನ ಯಥಾರ್ಥವಚನೇನ, ತಪಸಾ ವರ್ಣಾಶ್ರಮೋಚಿತಧರ್ಮಾನುಷ್ಠಾನಪೂರ್ವಂ ನಿತ್ಯಂ ಭಗವದನುಚಿಂತನೇನ, ಸಮ್ಯಜ್ಞಾನೇನ ಗುರೂಪದೇಶಜನ್ಯತತ್ವವಿಷಯಕಸಮ್ಯಜ್ಞಾನೇನ, ನಿತ್ಯಂ ಸರ್ವೇಂದ್ರಿಯನಿಯಮನರೂಪ ಬ್ರಹ್ಮಚರ್ಯೇಣಾಂಽತಃ ಶರೀರೇ ಶರೀರಾಂತಃ ಜ್ಯೋತಿರ್ಮಯಃ ಪ್ರಚುರಪ್ರಕಾಶಃ ಶುಭ್ರಃ ಶುದ್ಧಃ ಜಡಾಮಿಶ್ರಃ ಏಷ ಆತ್ಮಾ ಲಭ್ಯೋಽಪರೋಕ್ಷವಿಷಯೋಽಪರೋಕ್ಷದ್ವಾರಾ ಪ್ರಾಪ್ಯೇ ಇತಿ ವಾಽರ್ಥಃ । ಕ್ಷೀಣದೋಷಾಃ ಯತಯಃ ಪ್ರಯತ್ನಶೀಲಾಃ ಯಂ ಪಶ್ಯಂತಿ ಏಷ ಆತ್ಮಾ ಇತ್ಯನ್ವಯಃ ॥

ಭಗವಂತನ ಅಪರೋಕ್ಷ ಜ್ಞಾನಕ್ಕೆ ಧ್ಯಾನವು ಸಾಧನವೆಂದು ಹಿಂದೆ ನಿರೂಪಿಸಿದೆ. ಅದಕ್ಕೆ ಸಹಕಾರಿಯಾದುದನ್ನು ತಿಳಿಸುತ್ತಾ, ಯಥಾರ್ಥವಚನದಿಂದ, ವರ್ಣಾಶ್ರಮೋಚಿತವಾದ ಧರ್ಮಾನುಷ್ಠಾನ ಪೂರ್ವಕವಾಗಿ ನಿತ್ಯದಲ್ಲಿಯೂ ಶ್ರೀಹರಿಯ ಚಿಂತನೆಯಿಂದ, ಗುರುಗಳ ಉಪದೇಶದಿಂದ ಜನ್ಯವಾದ ತತ್ವಜ್ಞಾನದಿಂದ, ನಿತ್ಯದಲ್ಲಿಯೂ, ಸರ್ವೇಂದ್ರಿಯ ನಿಯಮವೆಂಬ ಬ್ರಹ್ಮಚರ್ಯದಿಂದ, ಶರೀರದ ಒಳಗೆ, ಪ್ರಕಾಶರೂಪನಾದ, ಜಡಾಮಿಶ್ರನಾದ ಈ ಶ್ರೀಹರಿಯು ಅಪರೋಕ್ಷಜ್ಞಾನದ ದ್ವಾರಾ ಲಭ್ಯನು. ಅಂತವರು ದೋಷರಹಿತರಾಗಿ, ಪ್ರಯತ್ನಶೀಲರಾಗಿ ಈ ಶ್ರೀಹರಿಯನ್ನು ನೋಡುತ್ತಾರೆ.

**ಮಂ ॥ ಸತ್ಯಮೇವ ಜಯತಿ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ । ಯೇನಾಽಽಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ॥ 6 ॥**

**ಖಂಡಾರ್ಥ : ಹರಿಭಕ್ತಸ್ಯೈವ ಭಗವತ್ಪ್ರಾಪ್ತಿಃ ನ ತದ್ವಿಮುಖಸ್ಯೇತ್ಯಾಹ – ಸತ್ಯಮೇವೇತಿ । ಸದ್ಗುಣತ್ವಹೇತುನಾ ಸತ್ಯಮಿತಿ ಹರಿರುಚ್ಯತೇ । ತನ್ನಿಷ್ಠಭಕ್ತ್ಯತಿಶಯೇನ ತಸ್ಮಿನ್ನೇವಮಗ್ನತ್ವಹೇತುನಾ ಸತ್ಯಭಕ್ತೋಽಪಿ ಸತ್ಯಪದೇನಾತ್ರ ಗೃಹ್ಯತೇ । ತಥಾಚ ಸತ್ಯಂ ಸತ್ಯಾಖ್ಯಭಗವನಿಷ್ಠಾಯುಕ್ತಮಧಿಕಾರಿ ಜೀವಜಾತಮೇವ ಜಯತಿ ಪ್ರಪ್ನೋತಿ । ಆತ್ಮಾನಮಿತಿ ವಿಪರಿಣಾಮೇನಾನ್ವಯಃ । ನಾನೃತಂ ಋತಾಖ್ಯಹರಿವಿರುದ್ಧತ್ವಹೇತುನಾ ಅನೃತಪದಾಭಿಧೇಯಮಸುರಜಾತಂ ನ ಜಯತ್ಯಾತ್ಮಾನಮಿತ್ಯರ್ಥಃ । ಕುತ ಏವಂ ಸತ್ಯನಿಷ್ಠ ಏವ ತಮಾಪ್ನೋತಿ, ನಾನ್ಯ ಇತ್ಯತ್ ಸ್ತತ್ಪ್ರಾಪ್ತಿಮಾರ್ಗಸ್ಯ ತದಧೀನತ್ವಾದಾಹ – ಸತ್ಯೇನೇತಿ ॥ ಯೋಜನಾತು – ಯತ್ರ ಲೋಕೇ ಸತ್ಯಸ್ಯ ಸದ್ಗುಣಸ್ಯ ಹರೇಃ ಪರಮಂ ತನ್ನಿಧಾನಂ ಪ್ರತ್ಯಕ್ಷತಯಾ ಸನ್ನಿಧಾನಂ ತಂ ವೈಕುಂಠಲೋಕಂ ಯೇನ ಪಥಾ ಮಾರ್ಗೇಣ ಆಪ್ತಕಾಮಾ ಋಷಯೋ ಜ್ಞಾನಿನಃ ಆಕ್ರಮಂತಿ ಗಚ್ಛಂತಿ ಅಯಂ ದೇವಯಾನಾಖ್ಯಃ ಪಂಥಾಃ ಸತ್ಯೇಣ ಹರಿಣಾ ವಿತತೋ ವಿಸ್ತೃತಃ ತದಧೀನಃ ಇತಿ ಯಾವತ್ ॥**

ಹರಿಭಕ್ತರಿಗೆ ಶ್ರೀಹರಿಯ ಪ್ರಾಪ್ತಿಯು, ಶ್ರೀಹರಿಯಿಂದ ವಿಮುಖನಾದವನಿಗೆ ಸಾಧ್ಯವಿಲ್ಲವೆಂದು ತಿಳಿಸುತ್ತಾರೆ. ಸದ್ಗುಣಯುಕ್ತನಾದ ಶ್ರೀಹರಿಯನ್ನು ಸತ್ಯವೆಂದು ಹೇಳುತ್ತಾರೆ. ಆ ಶ್ರೀಹರಿಯಲ್ಲಿ ಭಕ್ತಿಯ ಅತಿಶಯದಿಂದ ಅವನಲ್ಲೇ ಮಗ್ನನಾದ

ಶ್ರೀಹರಿಯ ಭಕ್ತನನ್ನೂ ಸಹ ಸತ್ಯವೆನ್ನುತ್ತಾರೆ. ಭಗವಂತನಲ್ಲಿ ಭಕ್ತರಾದ ಅಧಿಕಾರಿಗಳ ಗುಂಪೇ ಶ್ರೀಹರಿಯನ್ನು ಹೊಂದುತ್ತಾರೆ. ಶ್ರೀಹರಿಯ ವಿರುದ್ಧರಾದ್ದರಿಂದ ಅನೃತಶಬ್ದವಾಚ್ಯರಾದ ದೈತ್ಯರುಗಳು ಶ್ರೀಹರಿಯನ್ನು ಹೊಂದುವುದಿಲ್ಲ. ಯಾವ ಲೋಕದಲ್ಲಿ ಶ್ರೀಹರಿಯ ಪ್ರತ್ಯಕ್ಷ ಸನ್ನಿಧಾನವಿದೆಯೋ ಆ ವೈಕುಂಠಲೋಕವನ್ನು ಆಪ್ತಕಾಮರಾದ ಋಷಿಗಳು ಯಾವ ದೇವಯಾನವೆಂಬ ಮಾರ್ಗದಲ್ಲಿ ಹೊಂದುತ್ತಾರೆಯೋ ಅಂತಹ ಮಾರ್ಗಗಳೂ, ಲೋಕಗಳೂ ಶ್ರೀಹರಿಗೆ ಅಧೀನವಾಗಿದೆ ಮತ್ತು ಶ್ರೀಹರಿಯಿಂದ ವ್ಯಾಪಿಸಲ್ಪಟ್ಟಿದೆ.

**ಮಂ ॥ ಬೃಹಚ್ಚ ತದ್ದಿವ್ಯಮಚಿಂತ್ಯರೂಪಂ ಸೂಕ್ಷ್ಮಾಚ್ಚ ತತ್ಸೂಕ್ಷ್ಮತರಂ ವಿಭಾತಿ । ದೂರಾತ್ಸುದೂರೇ ತದಿಹಾಂತಿಕೇ ಚ ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಂ ॥ 7 ॥**

**ಖಂಡಾರ್ಥ : ಸತ್ಯಸ್ಯ ಮಹಿಮಾನಮಾಹ – ಬೃಹಚ್ಚ ತದಿತ್ಯಾದಿನಾ ॥ ತತ್ಸತ್ಯಾಖ್ಯಂ ವಸ್ತು ದೇಶಕಾಲಗುಣೈಃ ಬೃಹತ್ ಬೃಂಹಿತಮ್ । ವಿಶೇಷಣ ಸಮುಚ್ಚಯೇ ಚ ಶಬ್ಧಃ । ದಿವ್ಯಮದ್ಭುತಮತಏವಾಚಿಂತ್ಯರೂಪಮ್ । ಸೂಕ್ಷ್ಮಾತ್ ಪ್ರಕೃತ್ಯಾದೇಃ ತತ್ಸತ್ಯಂ ಸೂಕ್ಷ್ಮತರಂ ಚಾತ್ಯಂತಮಪ್ರತಿಘಮ್ । ಅಣೋರಣುತರಂ ಚೇತಿ ವಾರ್ಥಃ । ವಿಭಾತಿ ವಿಶೇಷೇಣ ಪ್ರಕಾಶಮಾನಮಾಸ್ತೇ । ಭಾದೀಪ್ತಾವಿತಿ ಧತೋಃ । ತತ್ಸತ್ಯಾಖ್ಯಂ ಬ್ರಹ್ಮ ದೂರಾತ್ಸುದೂರೇ ಇಹಾಂತಿಕೇ ಚ । ಸರ್ವಗತ್ವಾದಿತಿ ಭಾವಃ । ಪಶ್ಯತ್ಸು ಪಶ್ಯತಾಂ ಜ್ಞಾನಿನಾಮಿಹೈವ ಶರೀರೇ ಹೃದಯಗುಹಾಯಾಂ ನಿಹಿತಂ ಸಂಸ್ಥಿತಮ್ ॥**

ಸತ್ಯಶಬ್ದವಾಚ್ಯನಾದ ಶ್ರೀಹರಿಯ ಮಹಿಮೆಯನ್ನು ಹೇಳುತ್ತಾರೆ. ಆ ಶ್ರೀಹರಿಯು ದೇಶಕಾಲಗಳಿಂದ ಪೂರ್ಣನಾಗಿದ್ದಾನೆ. ಅದ್ಭುತನಾಗಿರುವುದರಿಂದ ಅಚಿಂತ್ಯನಾಗಿದ್ದಾನೆ. ಸೂಕ್ಷ್ಮವಾದ ಪ್ರಕೃತಿಗಳಿಗಿಂತಲೂ ಸೂಕ್ಷ್ಮನಾಗಿದ್ದಾನೆ. ಅಣುಪದಾರ್ಥಗಳಿಂದಲೂ ಅಣುರೂಪನಾಗಿದ್ದಾನೆ. ವಿಶೇಷವಾಗಿ ಎಲ್ಲಾ ಪದಾರ್ಥಗಳಲ್ಲಿಯೂ ಪ್ರಕಾಶಮಯನಾಗಿದ್ದಾನೆ. ಆ ಶ್ರೀಹರಿಯು ಅತ್ಯಂತದೂರದಲ್ಲಿಯೂ, ಅತ್ಯಂತ ಸಮೀಪದಲ್ಲಿಯೂ ಇರುವುದರಿಂದ ಅವನು ಸರ್ವಗತನಾಗಿದ್ದಾನೆ. ಜ್ಞಾನಿಗಳ ಹೃದಯಗುಹೆಯಲ್ಲಿ ಸನ್ನಿಹಿತನಾಗಿದ್ದಾನೆ.

ಮಂ ॥ ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ । ಜ್ಞಾನಪ್ರಸಾದೇನ ವಿಶುದ್ಧಸತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥ 8 ॥

ಖಂಡಾರ್ಥ : ಏವಂ ವಿಧಸ್ಯ ಭಗವತೋ ಜ್ಞಾನಂ ಚಕ್ಷುರಾದಿದೇವತೋಪಾಸನಾಬಲಾದ್ಭವತಿ ಕಿಮಿತ್ಯತೋ ನೇತ್ಯಾಹ – ನ ಚಕ್ಷುಷೇತಿ ॥ ಚಕ್ಷುರಾಧಿಷ್ಠಾತೃದೇವತಾಪ್ರಸಾದೇನ ನ ಗೃಹ್ಯತೇ । ಗುಹಾಶಯಾಂ ನಿಹಿತಂ ವಸ್ತ್ವಿತ್ಯನುಷಂಗಃ । ವಾಚಾ ವಾಗ್ದೇವತಾಪ್ರಸಾದೇನೇತ್ಯರ್ಥಃ । ಅನ್ಯೈರಿಂದ್ರಿಯಾಂತರದೇವೈಃ, ತಪಸಾಽನಶನಾದಿವ್ರತೇನ, ಕರ್ಮಣಾ ವರ್ಣಾಶ್ರಮೋಚಿತಧರ್ಮೇಣ ವಾ ನ ಗೃಹ್ಯತೇ । ಕೇನ ತರ್ಹಿ ಇತ್ಯತ ಆಹ – ಜ್ಞಾನೇತಿ ಜ್ಞಾನರೂಪಸ್ಯ ವಾಯೋಶ್ಚತುರ್ಮುಖಸ್ಯವಾ ಪ್ರಸಾದೇನ । ವಿಜ್ಞಾನ – ಶಕ್ತಿರಹವಮಾಸವುನಂತಶಕ್ತೇಃ ಇತ್ಯುಕ್ತೇಃ । 'ಸತ್ಯಂಜ್ಞಾನವುನಂತವಮ್' ಇತ್ಯಾದೇಜ್ಞಾನಸ್ವರೂಪಸ್ಯಹರೇಃ ಪ್ರಸಾದೇನೇತಿ ವಾರ್ಥಃ । 'ಅತೋಽನಂತೇನ ತಥಾಹಿ ಲಿಂಗಮ್' ಇತಿ ಸೂತ್ರಾತ್ । ವಾಯ್ವಾದಿಸ್ತ್ವನುಜ್ಞಾಪ್ರದ ಇತಿ ಧ್ಯೇಯಮ್ । ವಿಶುದ್ಧಸತ್ವಃ ರಜಸ್ತಮೋಭ್ಯಾಮಮಿಶ್ರಿತೋದ್ರಿಕ್ತ ಸತ್ವ ಗುಣೋ ಭವತಿ । ತತಸ್ತು ವಿಶುದ್ಧಸತ್ವಾದೇವ ನಿಷ್ಕಲಂ ಷೋಡಶಕಲಾತ್ಮಕದೇಹಹೀನಂ ಧ್ಯಾಯಮಾನೋ ನಿರಂತರಚಿಂತಾಂ ಕುರ್ವನ್ ಭಗವಂತಂ ಪಶ್ಯತೇ ಪಶ್ಯತಿ ॥

ಇಂತಹ ಶ್ರೀಹರಿಯ ಜ್ಞಾನವು ಚಕ್ಷುರಾದಿದೇವತೆಗಳ ಉಪಾಸನೆಯ ಬಲದಿಂದ ಸಾಧ್ಯವಿಲ್ಲವೆಂದು ತಿಳಿಸುತ್ತಾರೆ. ಹೃದಯಗುಹಾದಲ್ಲಿ ನಿಹಿತನಾದ ಶ್ರೀಹರಿಯನ್ನು ಚಕ್ಷುಶ್ರೋತ್ರೇಂದ್ರಿಯಾಭಿಮಾನಿಗಳ ಪ್ರಸಾದದಿಂದಲಾಗಲಿ, ಇಂದ್ರಿಯಾಂತರ ದೇವತೆಗಳಿಂದಾಗಲೀ, ಉಪವಾಸಾದಿ ವ್ರತಗಳಿಂದಾಗಲೀ, ವರ್ಣಾಶ್ರಮೋಚಿತ ಕರ್ಮಗಳಿಂದಲಿ ಹೊಂದಲು ಸಾಧ್ಯವಿಲ್ಲ. ಆದರೆ ಜ್ಞಾನಸ್ವರೂಪರಾದ ವಾಯುದೇವರ ಅಥವಾ ಚತುರ್ಮುಖರ ಪ್ರಸಾದದಿಂದ, ಅಥವಾ ಜ್ಞಾನಸ್ವರೂಪನಾದ ಶ್ರೀಹರಿಯ ಪ್ರಸಾದದಿಂದಲೇ ಸಾಧ್ಯವು. ವಾಯುದೇವರು ಅನುಜ್ಞಪ್ರದಾಯಕರಾಗಿರುತ್ತಾರೆ. ಆಗ ಆ ಸಾಧಕನು ರಜೋಗುಣ ತಮೋಗುಣಗಳಿಂದ ಕೂಡದೇ ಇರುವ, ಸತ್ವಗುಣವುಳ್ಳವನಾಗಿರುತ್ತಾನೆ. ಆಮೇಲೆ ಷೋಡಶಕಲಾರಹಿತನಾದ ಶ್ರೀಹರಿಯನ್ನು ನಿರಂತರವಾಗಿ ಚಿಂತಿಸುತ್ತ ಶ್ರೀಹರಿಯನ್ನು ನೋಡುತ್ತಾನೆ.

**ಮಂ ॥ ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ । ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ ॥ 9 ॥**

ಖಂಡಾರ್ಥ : ಕೇನೇಂದ್ರಿಯೇಣೇತ್ಯತ ಆಹ – ಏಷೋಽಣುರಿತಿ ॥ ಏಷೋಽಣುರೂಪೇಣ ಸರ್ವಪ್ರಾಣಿಷು ಸ್ಥಿತ ಆತ್ಮಾ ಚೇತಸಾ ವೇದಿತವ್ಯೋ ಜ್ಞಾತವ್ಯಃ । ಏಷ ಇತ್ಯುಕ್ತಃ ಕಃ ಇತ್ಯತ ಆಹ – ಯಸ್ಮಿನ್ನಿತಿ ॥ ಪ್ರಜಾನಾಂ ಸರ್ವಂ ಚಿತ್ತಂ ಪ್ರಾಣೈರಿಂದ್ರಿಯೈಸ್ಸಹ ಯಸ್ಮಿನ್ ಪ್ರಾಣೇ ಮುಖ್ಯವಾಯಾವೋತಮಾಶ್ರಿತಂ ಸ ಪ್ರಾಣೋ ಯಸ್ಮಿನ್ವಿಶುದ್ಧೇ ನಿಷ್ಕಲೇ ಹರೌ ಪಂಚಧಾ ಪ್ರಾಣಾಪಾನಾದಿ ಪಂಚರೂಪಾತ್ಮನಾ ವಿವೇಶ ಆಶ್ರಿತಸ್ತಿಷ್ಠತಿ, ವಿಭವತಿ ಚ ವಿಭವಯುಕ್ತಶ್ಚ ಭವತಿ ಏಷ ಆತ್ಮೇತಿ ಯೋಜನಾ ॥

ಇಂತಹ ಶ್ರೀಹರಿಯನ್ನು ಯಾವ ಇಂದ್ರಿಯದಿಂದ ತಿಳಿಯಬೇಕೆಂಬ ಪ್ರಶ್ನೆಗೆ ಉತ್ತರಿಸುತ್ತಾರೆ. ಎಲ್ಲಾ ಪ್ರಾಣಿಗಳಲ್ಲಿಯೂ ಅಣುರೂಪನಾಗಿರುವ ಶ್ರೀಹರಿಯು ಮನಸ್ಸಿನಿಂದ ತಿಳಿಯಲ್ಪಡುವವನು. ಎಲ್ಲಾ ಜೀವರುಗಳ ಮನಸ್ಸು, ಇಂದ್ರಿಯಗಳಿಂದ ಸಹಿತವಾಗಿ ಯಾವ ಮುಖ್ಯಪ್ರಾಣನಲ್ಲಿ ಆಶ್ರಿತವಾಗಿದೆಯೋ ಆ ಮುಖ್ಯಪ್ರಾಣನು ವಿಶುದ್ಧನಾದ ಶ್ರೀಹರಿಯಲ್ಲಿ ಪ್ರಾಣಾಪಾನಾದಿರೂಪಗಳಿಂದ ಆಶ್ರಿತನಾಗಿದ್ದಾನೆ. ಮಹಿಮಾಯುಕ್ತನಾಗಿದ್ದಾನೆ ಅಂತವನು ಶ್ರೀಹರಿಯು.

**ಮಂ ॥ ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ ॥ 10 ॥**

ಖಂಡಾರ್ಥ : ಆತ್ಮವೇದಿನೋ ಮಹಿಮಾನಮಾಹ – ಯಂ ಯಮಿತಿ – ವಿಶುದ್ಧಸತ್ತ್ವ ಆತ್ಮವೇದೀ ಯಂ ಯಂ ಲೋಕಂ ಮನಸಾ ಸಂವಿಭಾತಿ ಭಾವಯತಿ, ಗಚ್ಛತೀತಿ ಯಾವತ್ । ಯಾಂಶ್ಚ ಕಾಮಾನ್ ಕಾಮ್ಯಮಾನಾನ್ ವಿಷಯಾನ್ ಕಾಮಯತೇ ಇಚ್ಛತಿ । ತಂ ತಂ ಲೋಕಂ ತಾಂಶ್ಚ ಕಾಮಾನ್ ಜಯತೇ ಪ್ರಾಪ್ನೋತಿ । ತಸ್ಮಾದಾತ್ಮಜ್ಞಾನಿನೋ ಮಹತ್ವಾದ್ಭೂತಿ ಕಾಮೋ ಭಾಗ್ಯಕಾಮಃ ಆತ್ಮಜ್ಞಂ ಭಗವಜ್ಞಾನಿನಮರ್ಚಯೇತ್ ಪೂಜಯೇತ್ । 'ಅರ್ಚ ಪೂಜಾಯಾಮ್' । ಹಿಶಬ್ದಃ ತದರ್ಚನೇನ ಭೂತಿಮಾನ್ಭವತೀತಿ ನಿಶ್ಚಯಾರ್ಥಃ ॥

ಆತ್ಮಜ್ಞಾನಿಗಳ ಮಹಿಮೆಯನ್ನು ನಿರೂಪಿಸುತ್ತಾರೆ. ಶುದ್ಧಸತ್ವನಾಗಿ ಆತ್ಮಜ್ಞಾನಿಯು ಯಾವ ಯಾವ ಲೋಕಗಳನ್ನು ಕುರಿತು ಮನಸ್ಸಿನಿಂದ ಹೋಗುತ್ತಾನೆಯೋ, ಯಾವ ಯಾವ ವಿಷಯಗಳನ್ನು ಇಚ್ಛಿಸುತ್ತಾನೆಯೋ, ಆಯಾ ಲೋಕಗಳನ್ನು ಹಾಗೂ ವಿಷಯುಗಳನ್ನು ಹೊಂದುತ್ತಾನೆ. ಇಂತಹ ಆತ್ಮಜ್ಞಾನಿಗಳು ಬಹಳ ಮಹಿಮರಾದ್ದರಿಂದ, ಭಾಗ್ಯಾಪೇಕ್ಷಿಯಾದವನು ಅಂತಹ ಜ್ಞಾನಿಗಳನ್ನು ಪೂಜಿಸಬೇಕು ಆಗ ಅವನಿಗೆ ಭಾಗ್ಯವು ಪ್ರಾಪ್ತವಾಗುತ್ತದೆ.

**ಇತಿ ಪಂಚಮಃ ಖಂಡಃ**

# ಅಥ ಷಷ್ಠಃ ಖಂಡಃ

**ಮಂ ॥ ಸ ವೇದೈತತ್ಪರಮಂ ಬ್ರಹ್ಮಧಾಮ ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಂ । ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ ಶುಕ್ರಮೇತ-ದತಿವರ್ತಂತಿ ಧೀರಾಃ ॥ 1 ॥**

**ಖಂಡಾರ್ಥ : ಆತ್ಮಜ್ಞಾರ್ಚಕಸ್ಯ ಭೂತಿಃ ಕೀದೃಶೀತ್ಯತೋ ವಾಯುಜ್ಞಾನದ್ವಾರಾಪರಮ-ಪುಮರ್ಥಹೇತು ಬ್ರಹ್ಮಜ್ಞಾನಾಪ್ತಿರೂಪೇತ್ಯಾಹ – ಸ ವೇದೈತದಿತಿ ॥ ಯೋಜನಾ ತು, ಯತ್ರ ಯಸ್ಮಿನ್ ಮುಖ್ಯವಾಯೌ ವಿಶ್ವಂ ಪೂರ್ಣಂ ಶುಭ್ರಂ ಶುದ್ಧಂ ಬ್ರಹ್ಮ ನಿಹಿತಂ ಸ್ಥಿತಂ ಸತ್ ಭಾತಿ, ವಾಯ್ವಾವಿಷ್ಟ ಜೀವಸ್ಯ ವಾಯುದ್ವಾರಾ ಜ್ಞಾನದೀಪನಂ ಕರೋತಿ ಏತತ್ಪರಮಂ ಮುಖ್ಯಂ ಬ್ರಹ್ಮಧಾಮ ಪರಬ್ರಹ್ಮಾಧಿಷ್ಠಾನಗೃಹಂ ಮುಖ್ಯವಾಯುಂ ಸ ಆತ್ಮಜ್ಞಾರ್ಚಕಃ ವೇದ ಜಾನಾತೀತಿ । ಯಸ್ತು ಆತ್ಮಜ್ಞಮರ್ಚಯತಿ ಸ ಮುಖ್ಯವಾಯುಜ್ಞೋ ಭವತಿ । ತಜ್ಜ್ಞಾನೇ ಚ ಸತಿ ತತ್ರಸ್ಥೋ ಹರಿಸ್ತದ್ದ್ವಾರಾ ತಸ್ಯಾತ್ಮಜ್ಞಾರ್ಚಕಸ್ಯ ವಿಶೇಷತೋ ಭಗವದ್ಜ್ಞಾನವೃದ್ಧಿಂ ಕರೋತೀತಿ ಭಾವಃ । ಕಥಮೇತಜ್ಜ್ಞಾನಸ್ಯ ಭೂತಿತ್ವಮ್? ಸುಖಪ್ರಾಪ್ತಿದುಃಖನಿರಾಸ-ಯೋರನ್ಯತರತ್ವಾಭಾವಾದಿತ್ಯತೋ ಬ್ರಹ್ಮಪ್ರಾಪ್ತಿಹೇತುತ್ವಾದಿತ್ಯಾಹ – ಉಪಾಸತೇ ಇತಿ ॥ ಯೇಽಕಾಮಾಃ ಕಾಮಾದಿದೋಷಹೀನಾಃ ಪುರುಷಂ ಪೂರ್ಣಷಡ್ಗುಣಂ ಬ್ರಹ್ಮೋಪಾಸತೇ, ಶ್ರವಣಮನನಧ್ಯಾನೈರ್ಜಾನಂತಿ ತಂ ಶುಕ್ರಂ ಶೋಕರಹಿತಮೇತದ್ ಬ್ರಹ್ಮ ಗಂತುಮಿತಿ ಶೇಷಃ । ಅತಿವರ್ತಂತಿ ಸಂಸಾರಕ್ಲೇಶಮತಿಕ್ರಮ್ಯ ವರ್ತಂತೆ, ಮುಕ್ತಾ ಭವಂತೀತ್ಯರ್ಥಃ । ಹಿ ಶಬ್ಧಃ ಪ್ರಸಿದ್ಧದ್ಯೋತಕಃ ॥**

ಯಜ್ಞನ ದ್ವಾರಾ ಪರಮಪುರುಷಾರ್ಥಮೋಕ್ಷಸಾಧನವಾದ ಬ್ರಹ್ಮಜ್ಞಾನಪ್ರಾಪ್ತಿಯೇ ಬ್ರಹ್ಮಜ್ಞಾನಿಯ ಅರ್ಚನೆಯ ಫಲವೆಂದು ಹೇಳುತ್ತಾರೆ.

ಮುಖ್ಯಪ್ರಾಣನಲ್ಲಿ, ಪೂರ್ಣನಾದ, ಶುದ್ಧನಾದ ಶ್ರೀಹರಿಯು ಸನ್ನಿಹಿತನಾಗಿದ್ದಾನೆ. ವಾಯುವಿನಿಂದ ಆವಿಷ್ಟನಾದ ಜೀವನಿಗೆ ವಾಯುದೇವರ ದ್ವಾರಾ ಜ್ಞಾನವನ್ನು ಕೊಡುತ್ತಾನೆ. ಪರಬ್ರಹ್ಮನ ವಿಶೇಷ ಸನ್ನಿಧಾನದಿಂದ ಕೂಡಿದ ಮುಖ್ಯಪ್ರಾಣನನ್ನು ಆ ಬ್ರಹ್ಮಜ್ಞಾನಿಯು ತಿಳಿಯುತ್ತಾನೆ. ಯಾರು ಬ್ರಹ್ಮಜ್ಞಾನಿಯನ್ನು ಅರ್ಚಿಸುತ್ತಾರೆಯೋ ಅವರು ಮುಖ್ಯಪ್ರಾಣದೇವರ ಜ್ಞಾನವುಳ್ಳವರಾಗಿರುತ್ತಾರೆ. ಅವರು

ಜ್ಞಾನವುಳ್ಳವರಾಗಿದ್ದರೆ, ಅಲ್ಲಿರುವ ಶ್ರೀಹರಿಯು ಆ ಮುಖ್ಯಪ್ರಾಣದ್ವಾರಾ ಇವನಿಗೆ ವಿಶೇಷವಾಗಿ ತನ್ನ ಜ್ಞಾನವೃದ್ಧಿಯನ್ನು ಮಾಡುತ್ತಾನೆ. ಸುಖಪ್ರಾಪ್ತಿ ದುಃಖನಿವೃತ್ತಿರೂಪವಾದ ಈ ಜ್ಞಾನವು ಹೇಗೆ ಭಾಗ್ಯವಾಗುತ್ತದೆ ಎಂದು ಪ್ರಶ್ನಿಸಿದರೆ ಉತ್ತರಿಸುತ್ತಾರೆ. ಯಾರು ನಿಷ್ಕಾಮನಾಗಿ ಗುಣಪೂರ್ಣನಾದ ಶ್ರೀಹರಿಯನ್ನು ಉಪಾಸಿಸುತ್ತಾರೋ, ಶ್ರವಣ ಮನನ ಧ್ಯಾನಗಳಿಂದ ತಿಳಿಯುತ್ತಾರೆಯೋ, ಅವರು ಶೋಕರಹಿತನಾದ ಈ ಶ್ರೀಹರಿಯನ್ನು ಹೊಂದಲು, ಸಂಸಾರದ ದುಃಖಗಳನ್ನು ದಾಟಿ ಮುಕ್ತರಾಗುತ್ತಾರೆ.

**ಮಂ ॥ ಕಾಮಾನ್ ಯಃ ಕಾಮಯತೇ ಮನ್ಯಮಾನಃ ಸ**
**ಕಾಮಭಿರ್ಜಾಯತೇ ತತ್ರ ತತ್ರ । ಪರ್ಯಾಪ್ತಕಾಮಸ್ಯ ಕೃತಾತ್ಮನಶ್ಚ**
**ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥ 2 ॥**

**ಖಂಡಾರ್ಥ : ಅಕಾಮಾ ಇತಿ ಕಿಮರ್ಥಮಿತ್ಯತಸ್ಸಕಾಮುತಯೋಪಾಸನೇ ಕ್ಷಯಿಷ್ಣುಲೋಕಪ್ರಾಪ್ತಿರೇವ ನ ನಿತ್ಯಲೋಕಾವಾಪ್ತಿರಿತ್ಯಾಹ – ಕಾಮಾನಿತಿ ॥ ಯಃ ಕಾಮಾನ್‌ವಿಷಯಾನ್ ಭದ್ರಾನ್‌ಮನ್ಯಮಾನಃ ಕಾಮಯತೇ ಇಚ್ಛತಿ । ವಿಷಯಕಾಮನಯಾ ಭಗವಂತಮುಪಾಸ್ತೇ ಇತಿ ಯಾವತ್ । ಸಃ ಪುಮಾನ್ ಕಾಮಭಿರ್ವಿಷಯೈಸ್ಸಹ ತತ್ರ ತತ್ರ ಲೋಕೇ ಭಾಗ್ಯಪುರುಷಸಂತತೌ ವಾ ಜಾಯತೇ । ಅಕಾಮತಾ ತರ್ಹಿ ಕಥಂ ಭವತೀತ್ಯತ ಆಹ – ಪರ್ಯಾಪ್ತೇತಿ ॥ ಯಥೇಷ್ಟಂ ವಿಷಯಾನ್ ಭುಕ್ತವಯೋಽತ ಏವ ಕೃತಾತ್ಮನಸ್ತೃಪ್ತಮನಸ್ಕಸ್ಯೇಹೈವ ಜನ್ಮನಿ ಸರ್ವೇ ಕಾಮಾಃ ಕಾಮನಾಃ ನಾನಾವಸ್ತುವಿಷಯಿಣ್ಯ ಇಚ್ಛಾಃ ಪ್ರವಿಲೀಯಂತಿ ನಿವೃತ್ತಾಃ ಭವಂತೀತಿ ॥**

ಸಕಾಮನೆಯ ಉಪಾಸನೆಯು ಅಲ್ಪಾಸ್ಥಿರಫಲಕವಾದ್ದರಿಂದ ನಿಷ್ಕಾಮನೆಯ ಉಪಾಸನೆಯು ನಿತ್ಯಲೋಕಪ್ರಾಪ್ತಿಗೆ ಸಾಧನವೆಂದು ತಿಳಿಸುತ್ತಾರೆ. ಯಾರು ಕಾಮನೆಯ ವಿಷಯಗಳನ್ನು ಮಂಗಳವೆಂದು ವಿಷಯಕಾಮನೆಯಿಂದ ಶ್ರೀಹರಿಯನ್ನು ಉಪಾಸಿಸುತ್ತಾರೆಯೋ ಅವರು ವಿಷಯಗಳಿಂದ ಸಹಿತನಾಗಿ, ಆಯಾ ಲೋಕಗಳಲ್ಲಿ ಭಾಗ್ಯಪುರುಷರ ಸಂತಾನದಲ್ಲಿ ಉತ್ಪನ್ನರಾಗುತ್ತಾರೆ. ನಿಷ್ಕಾಮತೆಯು ಹೇಗೆ ಎಂದರೆ ಉತ್ತರಿಸುತ್ತಾರೆ. ಯಥೇಷ್ಟವಾಗಿ ವಿಷಯಗಳನ್ನು ಭೋಗಿಸಿದವನಿಗೆ,

ಆದ್ದರಿಂದಲೇ ತೃಪ್ತಮನಸ್ಕನಾಗಿ ಈ ಜನ್ಮದಲ್ಲೇ ನಾನಾವಿಷಯಕವಾದ ಇಚ್ಛೆಗಳು ನಿವೃತ್ತವಾಗುತ್ತವೆ.

**ಮಂ ॥ ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥ 3 ॥**

ಖಂಡಾರ್ಥ : ನ ಚಕ್ಷುಷಾ ಗೃಹ್ಯತೇ ಇತ್ಯತ್ರ ದೇವತಾಂತರಶಕ್ತ್ಯಾ ಹರಿಂ ನ ಪಶ್ಯಂತಿ, ಕಿಂತು ಜ್ಞಾನಪ್ರಸಾದಾದಿತ್ಯುಕ್ತಂ, ತದ್ವಿಶದಯತಿ ನಾಯಮಿತಿ ॥ ಮೇಧಾ ಪ್ರಜ್ಞಾವಿಶೇಷಃ । ಅಯಮಾತ್ಮಾಭಕ್ತಿಹೀನಪ್ರವಚನಾದಿನಾ ನ ಲಭ್ಯಃ, ನ ಸಾಕ್ಷಾತ್ಕರ್ತುಂ ಶಕ್ಯಃ । ಅಪಿತು ಯಂ ಭಕ್ತಂ ಏಷಃ ಆತ್ಮಾ ವೃಣುತೇ ಸ್ವೀಕರೋತಿ, ಯಸ್ಮೈ ಪ್ರಸೀದತೀತಿ ಯಾವತ್ । ತೇನೈವ ಪ್ರಸಾದವಿಷಯೇಣೈವ ಲಭ್ಯಃ । ತದ್ವ್ಯನಕ್ತಿ – ತಸ್ಯ ಸ್ವಪ್ರಸಾದವಿಷಯಸ್ಯೈಷ ಪ್ರಸನ್ನಃ ಆತ್ಮಾ ಸ್ವಾಂ ತನೂಂ ವಿವೃಣುತೇ ಪ್ರಕಾಶಯತೀತಿ । ತಸ್ಯೈವಾಪರೋಕ್ಷವಿಷಯೋ ಭವತೀತ್ಯರ್ಥಃ ॥

"ನ ಚಕ್ಷುಷಾ ಗೃಹ್ಯತೆ" ಎಂಬಲ್ಲಿ ಬೇರೆ ದೇವತೆಗಳ ಶಕ್ತಿಯಿಂದ ಶ್ರೀಹರಿಯ ದರ್ಶನ ಸಾಧ್ಯವಿಲ್ಲ. ಜ್ಞಾನಪ್ರಸಾದದಿಂದ ಎಂದು ನಿರೂಪಿಸಿರುವುದನ್ನು ವಿಶದವಾಗಿ ಹೇಳುತ್ತಾರೆ. ಈ ಶ್ರೀ ಹರಿಯನ್ನು ಭಕ್ತಿ ರಹಿತವಾದ ಪ್ರವಚನದಿಂದಾಗಲೀ, ಪ್ರಜಾವಿಶೇಷದಿಂದಾಗಲೀ ಸಾಕ್ಷಾತ್ಕರಿಸಲು ಸಾಧ್ಯವಿಲ್ಲ. ಯಾವ ಭಕ್ತನನ್ನು ಸ್ವಾಮಿಯು ಇವನು ನನ್ನ ಭಕ್ತನೆಂದು ಸ್ವೀಕರಿಸುತ್ತಾನೆಯೋ, ಯಾರಿಗೆ ಅನುಗ್ರಹಿಸುತ್ತಾನೆಯೋ ಅವನಿಗೆ ಶ್ರೀಹರಿಯು ಪ್ರಸನ್ನನಾಗಿ ತನ್ನ ಸ್ವರೂಪವನ್ನು ಪ್ರಕಾಶಿಸುತ್ತಾನೆ. ಅವನ ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ.

**ಮಂ ॥ ನಾಯಮಾತ್ಮ ಬಲಹೀನೇನ ಲಭ್ಯೋ ನಚ ಪ್ರಮಾದಾತ್ತಪಸೋ ವಾಽಪ್ಯಲಿಂಗಾತ್ । ಏತೈರುಪಾಯೈರ್ಯತತೇ ಯಸ್ತು ವಿದ್ವಾಂಸ್ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ॥ 4 ॥**

ಖಂಡಾರ್ಥ : ತರ್ಹಿ ಪ್ರವಚನಾದೇರ್ವೈಯರ್ಥ್ಯಮಿತ್ಯತ ಆಹ – ನಾಯಮಿತಿ ॥ ಬಲಹೀನೇನ ಶ್ರವಣಮನನಭಕ್ತ್ಯಾದಿಬಲಹೀನೇನ । ಪ್ರಮಾದಾತ್ ಭಗವದ್ವಿಸ್ಮರಣಾದಿರೂಪಾತ್ ।

ದೃಷ್ಟಾಂತಾರ್ಥವೇತದುಕ್ತಿಃ । ಅಲಿಂಗಾಲ್ಲಿಂಗೋಪಲಕ್ಷಿತಪ್ರವಚನಾನುಕ್ತಾತ್ತಪಸೋಽಪೀತ್ಯರ್ಥಃ । ತರ್ಹಿ ಕೇನ ಲಭ್ಯಃ ಇತ್ಯತ ಆಹ – ಏತೈರಿತಿ ॥ ಭಕ್ತ್ಯಾದ್ಯುಪೇತಶ್ರವಣಾದಿರೂಪೈರುಪಾಯೈಃ ವಿದ್ವಾನ್ ಜ್ಞಾನಿ ಯಸ್ತು ಯತತೇ ಸಾಕ್ಷಾತ್ಕಾರಾಯ ತಸ್ಯೈಷ ಆತ್ಮಾ ಬ್ರಹ್ಮಧಾಮಾ ಪ್ರಾಗುಕ್ತದಿಶಾ ಮುಖ್ಯವಾಯುಂ ವಿಶತೇ ಪ್ರವಿಶತಿ । ಯಸ್ತು ಏತೈರುಪಾಯೈಃ ವಿದ್ವನ್ಭೂತ್ವಾ ಪುನರ್ಬ್ರಹ್ಮಜ್ಞಾನಾಯ ಯತ್ನವಾನಾಸ್ತೇ ತಸ್ಮಿನ್ಪುರುಷೇ ಸ್ಥಿತಮುಖ್ಯವಾಯೌ ವಿದ್ಯಮಾನೇ ಏವ ಭಗವಾನ್ ವಾಯುದ್ವಾರಾ ತಸ್ಯ ಜ್ಞಾನದೀಪನಂ ಕರೋತೀತಿ ಜ್ಞಾನದೀಪನಸ್ಯಾಗಂತುಕತ್ವೇನ ಹೇತುನಾ ತದಪೇಕ್ಷಯಾ ತಸ್ಯ ಬ್ರಹ್ಮಧಾಮ ವಾಯುಂ ವಿಶತೇ ಇತ್ಯುಚ್ಯತೇ । ಯಥಾ ಪಿಶಾಚಾವಿಷ್ಟಪುರುಷೇ ತಸ್ಮಿನ್ ಸದಾ ಸ್ಥಿತೋಽಪಿ ಮಂತ್ರಾದಿಭಿರಾವಿಷ್ಟಃ ಪಿಶಾಚಃ ಇತಿ ವ್ಯವಹಾರಸ್ತಥೇತಿ ಭಾವಃ ॥

ಹಾಗಾದರೆ ಪ್ರವಚನಾದಿಗಳು ವ್ಯರ್ಥವೆಂಬ ಶಂಕೆಗೆ ಉತ್ತರಿಸುತ್ತಾರೆ. ಈ ಪರಮಾತ್ಮನನ್ನು, ಶ್ರವಣ, ಮನನ, ಭಕ್ತ್ಯಾದಿ ಬಲಹೀನನಿಂದ, ಶ್ರೀಹರಿಯ ವಿಸ್ಮರಣೆಯುಳ್ಳವನಿಂದ, ಪ್ರಮಾಣಗಳಲ್ಲಿ ಹೇಳದೇ ಇರುವ ತಪಸ್ಸುಗಳಿಂದ, ಹೊಂದಲು ಸಾಧ್ಯವಿಲ್ಲ. ಭಕ್ತ್ಯಾದಿ ಸಹಿತವಾದ ಶ್ರವಣಾದಿ ಉಪಾಯಗಳಿಂದ, ಯಾವ ಜ್ಞಾನಿಯು ಶ್ರೀಹರಿಯ ಸಾಕ್ಷಾತ್ಕಾರಕ್ಕೆ ಪ್ರಯತ್ನವನ್ನು ಮಾಡುತ್ತಾನೆಯೋ, ಅವನು ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಪಾತ್ರನಾದ ಮುಖ್ಯಪ್ರಾಣನನ್ನು ಪ್ರವೇಶಿಸುತ್ತಾನೆ. ಯಾರು ಈ ಉಪಾಯಗಳಿಂದ ಜ್ಞಾನಿಯಾಗಿ ಪುನಃ ಬ್ರಹ್ಮಜ್ಞಾನಕ್ಕೆ ಪ್ರಯತ್ನವನ್ನು ಮಾಡುತ್ತಾನೆಯೋ, ಅವನಿಗೆ ಅವನಲ್ಲಿರುವ ಮುಖ್ಯಪ್ರಾಣನಲ್ಲಿರುವ ಶ್ರೀಹರಿಯು ಜ್ಞಾನವನ್ನು ಕೊಡುತ್ತಾನೆ. ಹೇಗೆ ಪಿಶಾಚಿಯು ಆವಿಷ್ಟ ಪುರುಷನಲ್ಲಿ ಯಾವಾಗಲೂ ಇದ್ದರೂ ಮಂತ್ರಾದಿಗಳಿಂದ ಪಿಶಾಚಿಗಳು ಆವಿಷ್ಟವೆಂದು ವ್ಯವಹಾರವಾಗುತ್ತದೆಯೋ ಅದೇ ರೀತಿಯಲ್ಲಿ ಇಲ್ಲಿಯು ಸಹ ತಿಳಿಯಬೇಕು.

**ಮಂ ॥ ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ । ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಮುಕ್ತಾತ್ಮಾನಃ ಸರ್ವಮೇವಾಪಿಯಂತಿ ॥ 5 ॥**

ಖಂಡಾರ್ಥ : ಆತ್ಮಜ್ಞಾನಮಹಿಮಾನಮಾಹ – ಸಂಪ್ರಾಪ್ಯೈನಮಿತಿ ॥ ಜ್ಞಾನತೃಪ್ತಾಃ ಜ್ಞಾನೇನತೃಪ್ತಾಃ ಋಷಯಃ ಏನಂ ಭಗವಂತಂ ಸಂಪ್ರಾಪ್ಯ ಕೃತಾತ್ಮನಃ ಕೃತಕೃತ್ಯಾ, ವೀತರಾಗಾಃ

ಪ್ರಶಾಂತಾಃ ವಿಷಯೋಪರತಾ ಭವಂತಿ । ನ ಕೇವಲಮೇತಾವದೇವ, ಕಿಂತು ತೇ ಧೀರಾಃ ಸರ್ವತೋ ದೇಹಾದಿಬಂಧಾನ್ಮುಕ್ತಾತ್ಮನಸ್ಸಂತಸ್ಸರ್ವಗಂ ಭಗವಂತಂ ಪ್ರಾಪ್ಯ ಸರ್ವಮೇವ ಗುಣಪೂರ್ಣಂ ಭಗವಂತಮೇವಾಪಿಯಂತಿ ಇತರೈರಜ್ಞೇಯತಯಾ ಪ್ರವಿಶಂತಿ । ಪ್ರವಿಶ್ಯ ಚೇಚ್ಛಯಾಽಂತರ್ಬಹಿಸ್ಸಚರಂತೋ ಭೋಗಾನ್ ಭುಂಜಾನಾ ಆಸತೇ ಇತ್ಯರ್ಥಃ ॥

ಬ್ರಹ್ಮಜ್ಞಾನಿಯ ಮಹಿಮೆಯನ್ನು ಹೇಳುತ್ತಾರೆ. ಜ್ಞಾನದಿಂದ ತೃಪ್ತರಾದ ಋಷಿಗಳು ಶ್ರೀಹರಿಯನ್ನು ಹೊಂದಿ, ಕೃತಕೃತ್ಯರಾಗಿ, ರಾಗಾದಿದೋಷರಹಿತರಾಗಿ, ವಿಷಯಗಳಲ್ಲಿ ವಿರಕ್ತರಾಗುತ್ತಾರೆ. ಆ ಜ್ಞಾನಿಗಳು ದೇಹಾದಿಬಂಧಗಳಿಂದ ಮುಕ್ತರಾಗಿ, ಸರ್ವತ್ರ ವ್ಯಾಪ್ತನಾದ ಶ್ರೀಹರಿಯನ್ನು ಹೊಂದಿ, ಗುಣಪೂರ್ಣನಾದ ಶ್ರೀಹರಿಯನ್ನು ಇತರರಿಗೆ ತಿಳಿಯದ ರೀತಿಯಲ್ಲಿ ಪ್ರವಿಷ್ಟರಾಗಿ, ಸ್ವೇಚ್ಛೆಯಿಂದ ಒಳಗೂ ಹೊರಗೂ ಸಂಚರಿಸುತ್ತಾ ಅನೇಕ ಭೋಗಗಳನ್ನು ಭೋಗಿಸುತ್ತಾ ಇರುತ್ತಾರೆ.

**ಮಂ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇಷು ಪರಾಂತಕಾಲೇ
ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ 6 ॥**

ಖಂಡಾರ್ಥ : ಜ್ಞಾನಾನಂತರಮೇವ ಮುಕ್ತಾ ಭವಂತಿ ಕಿಮಿತ್ಯತೋ ನೇತ್ಯಾಹ - ವೇದಾಂತೇತಿ ॥ ವೇದಾನಾಮಂತೋ ನಿರ್ಣಯೋ ಯಸ್ಮಾತಸ್ಮಾನ್ಮೀಮಾಂಸಾ-ಶಾಸ್ತ್ರಜನಿತೇನ ವಿಜ್ಞಾನೇನ ಸುನಿಶ್ಚಿತಾರ್ಥಾಃ ಸಂಯಕ್ ನಿರ್ಣೀತಾರ್ಥಾಃ ಭಗವತಿ ಸರ್ವಕರ್ಮಣಾಂ ಸಮರ್ಪಣಾಖ್ಯಸನ್ಯಾಸಯೋಗಾದುಪಾಯಾಚ್ಛುದ್ಧಸತ್ವಾ ಯತಯಃ ಪ್ರಯತ್ನಶೀಲಾಃ ಯೇ ತೇ ಸರ್ವೇ ಬ್ರಹ್ಮಲೋಕೇಷು ಸತ್ಯಲೋಕೇಷು ಸ್ಥಿತ್ವೇತಿ ಶೇಷಃ । ಸ್ಥಾನ ಬೃಹುಲ್ಯಾದ್ಬಹುವಚನಮ್ । ಪರಾಂತಕಾಲೇ ಪರೇತಿ ಬ್ರಹ್ಮಣಃ ಶತಾಯುಷೋ ನಾಮ, ತಸ್ಯಾಂತಕಾಲೇ ಪರಾಮೃತಾತ್ ಪಕೃತಿಬಂಧಾತ್ ಮುಕ್ತಾಃ ಭವಂತೀತಿ । ತದುಕ್ತಂ ಸೂತ್ರೇ "ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ" ಇತಿ । ಏತಚ್ಚ ಪ್ರತೀಕೇಷು ಬ್ರಹ್ಮಧ್ಯಾತೃಪರಮ್ । ಅಪ್ರತೀಕಾಲಂಬನಾ ಯೇ ವ್ಯಾಪ್ತದರ್ಶಿನಃ ತೇತು ವೈಕುಂಠಾದಿಲೋಕೇಽಮುಕ್ತಸ್ಥಾನೇ ಸ್ಥಿತಂ ಭಗವಂತಮೇವ ಪ್ರಾಪ್ಯ ತತ್ರ ಸ್ಥಿತ್ವಾ, ಪರಾಂತಕಾಲಸಮಯೇ ಪುನಃ ಸತ್ಯಲೋಕಂ ಪ್ರಾಪ್ಯ ತೇನ ಸಹ ಮುಚ್ಯಂತೆ । ತದಾಹ ಸೂತ್ರೇ ಪರಂ "ಜೈಮಿನಿರ್ಮುಖ್ಯತ್ವಾತ್" ಇತಿ ॥

ಜ್ಞಾನಪ್ರಾಪ್ತವಾದ ನಂತರವೇ ಮುಕ್ತರಾಗುವುದಿಲ್ಲವೆಂದು ತಿಳಿಸುತ್ತಾರೆ. ಬ್ರಹ್ಮಮೀಮಾಂಸಾ ಶಾಸ್ತ್ರದ ವಿಚಾರದಿಂದ ಜನ್ಯವಾದ ವಿಜ್ಞಾನದಿಂದ ನಿಶ್ಚಿತವಾದಾರ್ಥವುಳ್ಳವರಾಗಿ, ಶ್ರೀಹರಿಯಲ್ಲಿ ಸರ್ವಕಾರ್ಯಗಳ ಸಮರ್ಪಣವೆಂಬ ವಿನ್ಯಾಸದ ಉಪಾಯದಿಂದ ಶುದ್ಧಸತ್ವವುಳ್ಳವರಾಗಿ, ಪ್ರಯತ್ನಶೀಲರಾಗಿ, ಸತ್ಯಲೋಕದಲ್ಲಿ ಕೆಲವು ಕಾಲಗಳಿದ್ದು, ಶತಾಯುಷಿಯಾದ ಬ್ರಹ್ಮದೇವರ ಅಂತ್ಯಕಾಲದಲ್ಲಿ ಈ ಸಂಸಾರಬಂಧದಿಂದ ಮುಕ್ತರಾಗುತ್ತಾರೆ. ಈ ವಿಷಯವನ್ನು "ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ" ಎಂಬ ಸೂತ್ರದಲ್ಲಿ ನಿರೂಪಿಸಲಾಗಿದೆ. ಇದು ಪ್ರತೀಕಗಳಲ್ಲಿ ಶ್ರೀಹರಿಯನ್ನು ಧ್ಯಾನಿಸುವಂತ ವಿಚಾರವು. ವ್ಯಾಪ್ತವಾದ ಶ್ರೀಹರಿಯನ್ನು ಧ್ಯಾನಿಸುವವರ ವಿಚಾರವು ವ್ಯಾಪ್ತನಾದ ಶ್ರೀಹರಿಯನ್ನು ಧ್ಯಾನಿಸುವಂತ ಅಪ್ರತೀಕಾಲಂಬನರು ಅಮುಕ್ತಸ್ಥಾನವಾದ ವೈಕುಂಠ ಲೋಕದಲ್ಲಿ ಇದ್ದು, ಶ್ರೀಹರಿಯನ್ನೇ ಹೊಂದಿ ಅಂತ್ಯಕಾಲದಲ್ಲಿ ಸತ್ಯಲೋಕಕ್ಕೆ ಬಂದು ಬ್ರಹ್ಮನಿಂದ ಸಹಿತರಾಗಿ ಮುಕ್ತರಾಗುತ್ತಾರೆ. ಇದೂ ಸಹ 'ಪರಂ ಜೈಮಿನಿಃ ಮುಖ್ಯತ್ವಾತ್' ಎಂಬ ಸೂತ್ರದಲ್ಲಿ ಉಲ್ಲೇಖಿತವಾಗಿದೆ.

**ಮಂ ॥ ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥ 7 ॥**

**ಖಂಡಾರ್ಥ : ಮುಕ್ತಿಪ್ರಕಾರಮಾಹ – ಗತಾ ಇತಿ ॥ ಪ್ರತಿಷ್ಠಾಃ ಸಂಸಾರಿಣಾಂ ಪ್ರತಿಷ್ಠಾ ನಿಯಮಕಾಃ ಕಲಾಃ ಕಲಾಭಿಮಾನಿನಃ ಪಂಚದಶ ದೇವಾಃ ಗತಾ ಮುಕ್ತಾಃ । ಯಸ್ಯ ಜೀವಸ್ಯ ಸಂಸಾರೇ ನಿಯಾಮಕತಯಾ ಸ್ಥಿತಾಸ್ತಾಃ ಕಲಾದೇವತಾಸ್ತಜ್ಜೀವಮುಕ್ತ್ಯವಸರೇ ಮುಕ್ತಾಃ ಸತ್ಯೋ ಮುಕ್ತಸ್ಯಾಪಿ ತಸ್ಯ ನಿಯಾಮಿಕಾಃ ಇತಿ ತಾತ್ಪರ್ಯಾರ್ಥಃ । ಪಂಚದಶಕಲಾಸ್ತು, 'ಸಪ್ರಾಣಮಸೃಜತ ಪ್ರಾಣಾತ್‌ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾಃ ಲೋಕೇಷು ನಾಮ ಚ' ಇತಿ ಷಟ್ಪ್ರಶ್ನೋಕ್ತದಿಶಾ ಧ್ಯೇಯಾಃ । ತದಭಿಮಾನಿದೇವತಾಶ್ಚ 'ಕರ್ಮೇತಿ ಪುಷ್ಕರ ಪ್ರೋಕ್ತಃ' ಇತ್ಯಾದಿ ಷಟ್‌ಪ್ರಶ್ನಭಾಷ್ಯೋಕ್ತದಿಶಾ ಪ್ರಾಣವಾಣಿವಿನಾಯಕಪ್ರಾಣಸುತ- ಮರುತ್‌ಪಾವಕಬುಧಶನೀಂದ್ರರುದ್ರಚಂದ್ರ ವರುಣವಹ್ನಿ ಸ್ವಾಹಾಪರ್ಜನ್ಯೋಷಾಃ ಕ್ರಮಾತ್**

ಜ್ಞೇಯಾಃ । ಉಕ್ತಂ ಹಿ 'ಯತ್ರ ಮೂರ್ತಿಧರಾ ಕಲಾ' ಇತ್ಯೇಕಾದಶಸ್ಕಂಧತಾತ್ಪರ್ಯೇ ಸಪ್ತದಶಾಧ್ಯಾಯೇ "ಕಲಾ ಪ್ರಾಣಾದ್ಯಾಃ ಸ ಪ್ರಾಣಮಸೃಜತ ಪ್ರಾಣಾತ್‌ಶ್ರದ್ಧಾಂ" ಇತ್ಯಾದಿ । ಯದ್ಯಪಿ ಕರ್ಮಾಭಿಮಾನಿನಾ ಪುಷ್ಕರೇಣ ಸಹ ಷೋಡಶಕಲಾಃ ತಥಾಪಿ ತಸ್ಯ ಕರ್ಮಾಣೀತಿ ಪೃಥಗುಕ್ತೇಃ ಪಂಚದಶತ್ವಮ್ । ಪೃಥಗುಕ್ತಿಕೃತ್ಯಂ ಭಾಷ್ಯೇ ವ್ಯಕ್ತಮ್ । ಸರ್ವೇ ದೇವಾಶ್ಚ ಕಲಾದೇವೇಭ್ಯೋಽನ್ಯೇ ಸರ್ವೇ ದೇವಾಶ್ಚ ಪ್ರತಿದೇವತಾಸು ದೇವತಾಪ್ರತಿಬಿಂಬಭೂತಾಸು ಪ್ರಜಾಸು ಸ್ಥಿತಾಸ್ತಿಷ್ಠಂತಿ । ಕರ್ಮಾಣಿ ಕರ್ಮಾಭಿಮಾನೀ ಪುಷ್ಕರಃ ವಿಜ್ಞಾನಮಯೋ ವಿಜ್ಞಾನರೂಪ ಆತ್ಮಾ ಜೀವಶ್ಚ ಅವ್ಯಯೇ ನಾಶರಹಿತೇ ಪರೇ ಪರಮಾತ್ಮನಿ, ಸರ್ವೇ ಷೋಡಶಕಲಾದೇವತಾಃ ಜೀವಾಶ್ಚೇತ್ಯೇತೇ ಸರ್ವೇ ಮುಕ್ತಾಃ ಸಂತ ಏಕೀಭವಂತಿ ಪರಮಾತ್ಮಾನಂ ಪ್ರವಿಶ್ಯ ತೇನ ಸಹ ಏಕಸ್ಥಾನಸ್ಥಿತಾ ಭವಂತೀತಿ ವಾ, ತದ್ಬುದ್ಧಿವಿಷಯೀಕೃತಾರ್ಥವಿಷಯಕಬುದ್ಧಿಮಂತೋ ನತು ತದ್ವಿರುದ್ಧಾರ್ಥ-ವಿಷಯಕಮತಿಯುಕ್ತಾಃ ಇತಿ ವಾರ್ಥಃ ॥

ಮುಕ್ತಿಯ ಪ್ರಕಾರವನ್ನು ಹೇಳುತ್ತಾರೆ. ಸಂಸಾರಿಗಳಿಗೆ ನಿಯಾಮಕರಾದ ಹದಿನೈದು ಕಲಾಭಿಮಾನಿದೇವತೆಗಳು ಮುಕ್ತರಾಗುತ್ತಾರೆ. ಸಂಸಾರದಲ್ಲಿ ಜೀವನಿಗೆ ನಿಯಾಮಕರಾದ ದೇವತೆಗಳು, ಜೀವನು ಮುಕ್ತನಾಗುವ ಕಾಲದಲ್ಲಿ ತಾವು ಮುಕ್ತರಾಗಿ, ಮುಕ್ತರಾದ ಜೀವರಿಗೆ ಮುಕ್ತಿಯಲ್ಲಿಯೂ ಸಹ ನಿಯಾಮಕರಾಗಿರುತ್ತಾರೆ. ಹದಿನೈದು ಕಲೆ ಹಾಗೂ ಅಭಿಮಾನಿದೇವತೆಗಳ್ನು ಹೀಗೆ ತಿಳಿಯಿರಿ. ಪ್ರಾಣ – ಮುಖ್ಯಪ್ರಾಣ, ಶ್ರದ್ಧಾ – ವಾಣೀ, ಆಕಾಶ – ವಿನಾಯಕ, ವಾಯು - ಪ್ರಾಣಸುತನಾದ ಮರುತ್, ಜ್ಯೋತಿ – ಪಾವಕ, ನೀರು – ಬುಧ, ಪೃಥ್ವಿ – ಶನಿ, ಇಂದ್ರಿಯ – ಇಂದ್ರದೇವರು, ಮನಸ್ಸು – ರುದ್ರ, ಅನ್ನ – ಚಂದ್ರ, ವೀರ್ಯ – ವರುಣ, ತಪಸ್ಸು – ವಹ್ನಿ, ಮಂತ್ರ – ಸ್ವಾಹಾ, ಕರ್ಮ – ಪರ್ಜನ್ಯ, ನಾಮ – ಉಷಾ. ಕರ್ಮಾಭಿಮಾನಿಯಾದ ಪುಷ್ಕರನನ್ನು ಗ್ರಹಿಸದೇ ಇರುವುದಕ್ಕೆ ಕಾರಣವನ್ನು ಭಾಷ್ಯಕಾರರು ಹೀಗೆ ನಿರೂಪಿದ್ದಾರೆ. 'ಕರ್ಮಾಣಿ' ಎಂದು ಬೇರೆಯಾಗಿ ವಚನವಿರುವುದರಿಂದ ನಾವು ಪುಷ್ಕರನನ್ನು ಈ ಹದಿನೈದರಲ್ಲಿ ಸೇರಿಸಿಲ್ಲ. ಈ ದೇವತೆಗಳು ದೇವತಾ ಪ್ರತಿಬಿಂಬರಾದ ಜೀವರುಗಳಲ್ಲಿ ಇರುತ್ತಾರೆ. ಕರ್ಮಾಭಿಮಾನಿ ಪುಷ್ಕರ, ವಿಜ್ಞಾನರೂಪನಾದ ಈ ಜೀವನು, ನಾಶರಹಿತನಾದ ಶ್ರೀಹರಿಯಲ್ಲಿ, ಎಲ್ಲಾ ಕಲಾಭಿಮಾನಿದೇವತೆಗಳೂ ಹಾಗೂ ಜೀವನು ಶ್ರೀಹರಿಯಲ್ಲಿ ಪ್ರವೇಶಿಸಿ, ಒಂದೇ ಸ್ಥಾನದಲ್ಲಿರುತ್ತಾರೆ. ಅಥವಾ ಇವರಿಬ್ಬರ ಬುದ್ಧಿಯು ಏಕವಿಷಯುಕವಾಗಿರುತ್ತದೆ. ಭಗವಂತನಿಗೆ ವಿರುದ್ಧ ವಿಷಯುವಾದ

ಬುದ್ಧಿರಹಿತರಾಗಿರುತ್ತಾರೆ.

**ಮಂ ॥ ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ನಾಮರೂಪೇಽವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥ 8 ॥**

ಖಂಡಾರ್ಥ : ಏಕೀಭಾವಪ್ರಕಾರಮೇವ ದೃಷ್ಟಾಂತೇನಾಹ – ಯಥಾ ನದ್ಯಃ ಇತಿ ॥ ಸ್ಯಂದಮಾನಾಃ ಪ್ರಸ್ರವಮಾಣಾಃ ಸಮುದ್ರ ಅಯನಂ ಯಾಸಾಂ ತಾಃ ಸಮುದ್ರಾಯಣಾಃ ನದ್ಯಃ, ಸಮುದ್ರಂ ಪ್ರಾಪ್ಯ ನಾಮರೂಪೇ ಸ್ವಕೀಯಂ ಗಂಗಾಗೋದಾವರ್ಯಾದಿ ನಾಮ ಗಂಗಾದಿರೂಪಂ ಚಾವಿಹಾಯ ಅತ್ಯಕ್ತ್ವಾ, ಮಣೀವೇತ್ಯಾದಾವಿವಾಪ್ರಗೃಹ್ಯತ್ವಮ್ । ಯದ್ವಾ ಸಾಧಾರಣಚೇತನೈರಜ್ಞೇಯನಾಮರೂಪತ್ವಾನ್ನಾಮರೂಪೇ ವಿಹಾಯೇತಿ ವಾ । ಅಸ್ತಮುದರ್ಶನಂ ಗಚ್ಛಂತಿ ಯಥಾ ತಥಾ ವಿದ್ವಾನ್ ಬ್ರಹ್ಮಜ್ಞಾನೀ ನಾಮರೂಪಾದ್ವಿಮುಕ್ತೋಽಮುಕ್ತಃ ನಾಮರೂಪಯುಕ್ತ ಏವ, ವಿಪ್ರಿಯಮಿತ್ಯತ್ರೇವ ವಿಶಬ್ದೋಽತ್ರ ನಿಷೇಧಾರ್ಥಃ । ಯದ್ವಾ ಸಂಸಾರಿಭಿರಜ್ಞೇಯನಾಮರೂಪತ್ವಾದ್ವಿಮುಕ್ತೋ ವಿಯುಕ್ತ ಇವ ಸ್ಥಿತಃ ಪರಾತ್ಪರಂ ಸರ್ವೋತ್ತಮಂ ದಿವ್ಯಮದ್ಭುತಂ ಪುರುಷಂ ಭಗವಂತಮುಪೈತಿ ಪ್ರಾಪ್ನೋತಿ ॥

ಏಕಭಾವಪ್ರಕಾರವನ್ನು ದೃಷ್ಟಾಂತ ಪೂರ್ವಕವಾಗಿ ಹೀಗೆ ತಿಳಿಸುತ್ತಾರೆ. ಹರಿಯುವ ಸಮುದ್ರವೇ ಆಶ್ರಯವಾಗುಳ್ಳ ನದಿಗಳು ಸಮುದ್ರವನ್ನು ಪ್ರವೇಶಿಸಿ, ಗಂಗಾ, ಗೋದಾವರಿ ಇತ್ಯಾದಿ ತಮ್ಮ ನಾಮಗಳನ್ನು ಪರಿತ್ಯಾಗ ಮಾಡದೆ, ಅಥವಾ ಸಾಧಾರಣರಾದ ಜೀವರುಗಳಿಂದ ಬೇರೆಯಾಗಿ ತಿಳಿಯಲ್ಪಡದೆ ಅಸ್ತಮವನ್ನು ಹೊಂದುತ್ತಾರೆ. ಅದೇ ರೀತಿಯಲ್ಲಿ ಬ್ರಹ್ಮಜ್ಞಾನಿಯು ತನ್ನ ನಾಮರೂಪಗಳಿಂದ ಕೂಡಿದವನಾಗಿಯೇ ಅಥವಾ ಸಂಸಾರಿಗಳಿಂದ ತಿಳಿಯಲ್ಪಡದೆಯೇ ಸರ್ವೋತ್ತಮನಾದ ಅದ್ಭುತನಾದ ಶ್ರೀಹರಿಯನ್ನು ಹೊಂದುತ್ತಾನೆ.

**ಮಂ ॥ ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ । ನಾಸ್ಯಾಬ್ರಹ್ಮವಿತ್ಕುಲೇ ಭವತಿ । ತರತಿ ಶೋಕಂ ಪಾಪ್ಮಾನಂ ಗುಹಾ**

ಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥ 9 ॥

ಖಂಡಾರ್ಥ : ಏತದುಪನಿಷದರ್ಥ ಜ್ಞಾನಿನಃ ಫಲಮಾಹ – ಸ ಯ ಇತಿ ॥ ಯೋಽಧಿಕಾರಿ ಏತತ್ಪರಮಂ ಬ್ರಹ್ಮ ವೇದ ಸ ಬ್ರಹ್ಮೈವ ಜ್ಞಾನಾನಂದಾದಿಸ್ವೋಚಿತಗುಣೈರ್ಬೃಂಹಿತ ಏವ ಭವತಿ, ನ ಪರಬ್ರಹ್ಮತಾಮಾಪ್ನೋತಿ । ಅಸ್ಯಕುಲೇಽಬ್ರಹ್ಮವಿದ್‌ಬ್ರಹ್ಮಾನಭಿಜ್ಞೋ ನ ಭವತಿ । ತರತಿ ಶೋಕಂ ತರತಿ ಪಾಪ್ಮಾನಮ್ । ಗುಹಾಗ್ರಂಥಿಭ್ಯಃ ಹೃದಯಸ್ಥಾವಿದ್ಯಾಕಾಮಕರ್ಮಾ-ದಿಬಂಧಾದ್ವಿಮುಕ್ತೋಽಮೃತೋ ಭವತಿ ॥

ಈ ಉಪನಿಷತ್ತಿನ ಅರ್ಥಜ್ಞಾನವುಳ್ಳವರಿಗೆ ಫಲವನ್ನು ಹೇಳುತ್ತಾರೆ. ಯಾವ ಅಧಿಕಾರಿಯು ಆ ಶ್ರೀಹರಿಯನ್ನು ತಿಳಿಯುತ್ತಾನೆಯೋ, ತನ್ನ ಯೋಗ್ಯತೆಗನುಸಾರವಾಗಿ ಜ್ಞಾನಾನಂದಾದಿಗಳಿಂದ ಪೂರ್ಣನಾಗಿ ಇರುತ್ತಾನೆ. ಇವನ ಕುಲದಲ್ಲಿ ಬ್ರಹ್ಮಜ್ಞಾನಿಯಾಗದವನು ಬರುವುದಿಲ್ಲ. ಈ ಸಂಸಾರದುಃಖವನ್ನು ದಾಟುತ್ತಾನೆ. ಹೃದಯದಲ್ಲಿರುವ ಅವಿದ್ಯಾಕಾಮಾದಿಬಂಧಗಳಿಂದ ವಿಮುಕ್ತನಾಗಿ ಮುಕ್ತನಾಗುತ್ತಾನೆ.

ಮಂ ॥ ತದೇಷ ಶ್ಲೋಕಃ । ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ । ತೇಷಾಮೇವೈತಾಂ ಬ್ರಹ್ಮ-ವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ॥ 10 ॥

ಖಂಡಾರ್ಥ : ಅಸ್ಯಾಃ ಉಪನಿಷದಃ ಕೋಽಧಿಕಾರೀತ್ಯತಸ್ತಂ ಶ್ಲೋಕೋದಾಹರಣೇನಾಹ – ತದೇಷ ಶ್ಲೋಕ ಇತಿ ॥ ತತ್ರೈತದ್ವಿದ್ಯಾಧಿಕಾರವಿಷಯೇ ವಕ್ಷ್ಯಮಾಣಶ್ಲೋಕೋ ಭವತೀ ಇತ್ಯರ್ಥಃ । ಶ್ರೋತ್ರಿಯಾಃ ಛಂದೋಽಧ್ಯೇತಾರಃ । ಬ್ರಹ್ಮನಿಷ್ಠಾಃ ಬ್ರಹ್ಮಣಿ ಭಕ್ತಿಮಂತಃ । ಸ್ವಯಂ ಜುಹ್ವತಃ ಅಗ್ನಿಹೋತ್ರಾದಿಕಮನುತಿಷ್ಠಂತಃ ಏಕಋಷೀನ್ ಪ್ರಧಾನಋಷೀನ್ ಶ್ರದ್ಧಯಂತಃ ಶ್ರದ್ಧಾಪೂರ್ವಕಮರ್ಚಯಂತಃ । ಯೈಸ್ತು ಶಿರೋವ್ರತಂ ವಿಧಿವತ್‌ಚೀರ್ಣಂ, ಶಿರೋವ್ರತಂ ನಾಮ ವ್ರತವಿಶೇಷಃ । ತೇಷಾಮೇವೈತಾಂ ಬ್ರಹ್ಮವಿದ್ಯಾಂ ಬ್ರಹ್ಮಜ್ಞಪ್ತಿ ಹೇತು ಭೂತಾಮುಪನಿಷದಂ । ವದೇತ ಆವಿಷ್ಕಾರೇಣ ವದೇತ ಸ್ಪಷ್ಟಮುಪದಿಶೇದಿತ್ಯರ್ಥಃ ।

ಭಾಸನೋಪಸಂಭಾಷಾಜ್ಞಾನಯತ್ನವಿಮತ್ಯುಪಮಂತ್ರಣೇಷು ವದ ಇತಿ ಭಾಸನಾರ್ಥೇ ಆತ್ಮನೇಪದಮ್ ॥

ಈ ಉಪನಿಷತ್ತಿಗೆ ಅಧಿಕಾರಿಗಳನ್ನು ಶ್ಲೋಕಪೂರ್ವಕವಾಗಿ ಹೇಳುತ್ತಾರೆ. ಶ್ರೋತ್ರಿಯರಾದ, ಶ್ರೀಹರಿಯಲ್ಲಿ ಭಕ್ತಿವುಳ್ಳಂತಹ, ಅಗ್ನಿಹೋತ್ರಾದಿಕರ್ಮಾನುಷ್ಠಾನ ಮಾಡುವಂತಹ, ಪ್ರಧಾನಋಷಿಗಳನ್ನು ಶ್ರದ್ಧಾಪೂರ್ವಕವಾಗಿ ಅರ್ಚಿಸುವಂತಹ, ವಿಧಿಗನುಸಾರವಾಗಿ ಶಿರೋವ್ರತಾದಿಗಳನ್ನು ಧರಿಸಿದಂತಹ ಅಧಿಕಾರಿಗಳಿಗೆ ಬ್ರಹ್ಮಜ್ಞಾನಪ್ರಾಪ್ತಿಗೆ ಸಾಧನವಾದ ಈ ಉಪನಿಷತ್ತನ್ನು ಸ್ಪಷ್ಟವಾಗಿ ಉಪದೇಶಿಸಿರಿ.

**ಮಂ ॥ ತದೇತತ್ಸತ್ಯಮೃಷಿರಂಗಿರಾಃ ಪುರೋವಾಚ**
**ನೈತದಚೀರ್ಣವ್ರತೋಽಧೀತೇ । ಓಂ ನಮಃ ಪರಮಋಷಿಭ್ಯೋ**
**ನಮಃ ಪರಮಋಷಿಭ್ಯಃ ॥ 11 ॥**

ಖಂಡಾರ್ಥ : ಸ್ವೋಕ್ತಂ ಪ್ರಮೇಯಮೃಷೀಣಾಮ್ಯುಕ್ತಮಿತ್ಯಾಹ – ತದೇತದಿತಿ ಅಂಗಿರಾ ಋಷಿಃ ಏತನ್ಮಯೋಪದಿಷ್ಟಂ ಪ್ರಮೇಯಮಚೀರ್ಣವ್ರತಃ ಪುಮಾನ್ ನಾಧೀತೆ ನಾವಧಾರಯೇತ್ ಇತಿ ಪುರೋವಾಚ । ತದೇತದೃಷಿಣೋಕ್ತಂ ಸತ್ಯಂ ಯಥಾರ್ಥಮಿತ್ಯರ್ಥಃ। ವೇದಪುರುಷಃ ಉಪನಿಷದಂ ಪ್ರಾಗುಕ್ತಾನೇಕಋಷಿಪ್ರಣಾಮೇನ ಸಮಾಪಯತಿ – ನಮ ಇತಿ ॥ ಆದರಾತ್ ದ್ವಿರುಕ್ತಿಃ ॥

ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥
ಆಥರ್ವಣೋಪನಿಷದೋ ಭಾಷ್ಯಾದ್ಯುಕ್ತಾರ್ಥ ಸಂಗ್ರಹಃ ।
ರಾಘವೇಂದ್ರೇಣ ಯತಿನಾ ಕೃತೋ ಮಾಧವತುಷ್ಟಯೇ ॥

ತಾವು ಹೇಳಿರುವ ಪ್ರಮೇಯವು ಋಷಿಗಳಿಂದಲೂ ಹೇಳಲ್ಪಟ್ಟಿದೆ ಎಂದು ಹೇಳಿ ಉಪಸಂಹರಿಸುತ್ತಾರೆ, ಅಂಗಿರಾ ಋಷಿಗಳು. ತಾವು ಹೇಳಿದ ಪ್ರಮೇಯವನ್ನು ಅನಧಿಕಾರಿಗಳಿಗೆ ಹೇಳಬಾರದೆಂದು ಹಿಂದೆ ಹೇಳಿದ್ದಾರೆ. ಇದು ಋಷಿಗಳ ವಚನವಾದ್ದರಿಂದ ಸತ್ಯವು, ವೇದಪುರುಷನು ಈ ಉಪನಿಷತ್ತನ್ನು ಅನೇಕ ಋಷಿಗಳಿಗೆ

ನಮಿಸುತ್ತಾ ಉಪಸಂಹರಿಸುತ್ತಾನೆ. ಆದರಕ್ಕಾಗಿ "ಪರಮ ಋಷಿಭ್ಯೋ ನಮಃ" ಎಂದು ಎರಡು ಸಲ ಹೇಳಲ್ಪಟ್ಟಿದೆ.

ಸಮಸ್ತಗುಣಪೂರ್ಣನಾದ, ದೋಷದೂರನಾದ, ಭಕ್ತಾಭೀಷ್ಟಪ್ರದಾಯಕನಾದ, ಶ್ರೀಪ್ರಾಣನಾಥನಾದ ವಿಷ್ಣುವಿಗೆ ನಮಸ್ಕಾರವು.

ಶ್ರೀರಾಘವೇಂದ್ರ ಯತಿಗಳಿಂದ ಆಥರ್ವಣೋಪನಿಷತ್ತಿನ ಭಾಷ್ಯಾದಿಗಳಲ್ಲಿ ಹೇಳಿರುವ ಅರ್ಥಸಂಗ್ರಹವು ಶ್ರೀಹರಿಗುರುಗಳ ಸಂತೋಷಕ್ಕಾಗಿ ಮಾಡಲ್ಪಟ್ಟಿದೆ.

## ಇತಿ ಷಷ್ಠಃ ಖಂಡಃ

**॥ ಇತಿ ಶ್ರೀ ರಾಘವೇಂದ್ರಯತಿ ವಿರಚಿತಃ ಆಥರ್ವಣಖಂಡಾರ್ಥ ಸಮಾಪ್ತಃ ॥**
**ಶ್ರೀ ಕೃಷ್ಣಾರ್ಪಣಮಸ್ತು**